# ಶತಕ ಸಂಪುಟ

ಡಾ. ವೀರಣ್ಣ ರಾಜೂರ



ಕರ್ನಾಟಕ ಸರ್ಕಾರ

**ಕನ್ನಡ ಮತ್ತು ಸಂಸ್ಕೃತಿ ಇಲಾಖೆ**
ಕನ್ನಡ ಭವನ, ಜೆ.ಸಿ.ರಸ್ತೆ
ಬೆಂಗಳೂರು – ೫೬೦ ೦೦೨

**SHATAKA SAMPUTA :** Edited by **Dr. Veernna Rajur,** Published by **Manu Baligar**, Director, Department of Kannada and Culture, Kannada Bhavana, J.C.Road, Bengaluru - 560 002.

ಈ ಆವೃತ್ತಿಯ ಹಕ್ಕು : ಕರ್ನಾಟಕ ಸರ್ಕಾರ

ಮುದ್ರಿತ ವರ್ಷ : ೨೦೧೧
ಪ್ರತಿಗಳು : ೧೦೦೦
ಪುಟಗಳು : xliv + ೧೨೩
ಬೆಲೆ : ರೂ. ೪೫/–

ರಕ್ಷಾಪುಟ ವಿನ್ಯಾಸ : **ಕೆ. ಚಂದ್ರನಾಥ ಆಚಾರ್ಯ**

ಮುದ್ರಕರು :
**ಮೆ॥ ಮಯೂರ ಪ್ರಿಂಟ್ ಆ್ಯಡ್ಸ್**
ನಂ. ೬೯, ಸುಬೇದಾರ್ ಛತ್ರಂ ರೋಡ್
ಬೆಂಗಳೂರು – ೫೬೦ ೦೨೦ ದೂ : ೨೩೩೪೨೬೨೪

**ಬಿ.ಎಸ್. ಯಡಿಯೂರಪ್ಪ**
ಮುಖ್ಯಮಂತ್ರಿಗಳು



ಕರ್ನಾಟಕ ಸರ್ಕಾರ

ವಿಧಾನಸೌಧ
ಬೆಂಗಳೂರು ೫೬೦ ೦೦೧

ಸಿಎಂ/ಪಿಎಸ್/೨೬/೧೧

# ಶುಭ ಸಂದೇಶ

ವಿಶ್ವ ಕನ್ನಡ ಸಮ್ಮೇಳನದ ಸಂಭ್ರಮಾಚರಣೆಯ ಸಂದರ್ಭದಲ್ಲಿ ಕನ್ನಡ ನಾಡು ಏಕೀಕರಣಗೊಂಡು ೫೫ನೇ ವರ್ಷಕ್ಕೆ ಹೆಜ್ಜೆಯನ್ನಿಟ್ಟಿದೆ. ಈ ಸಂದರ್ಭವನ್ನು ರಚನಾತ್ಮಕವಾಗಿ ದಾಖಲಿಸಿ ಸ್ಮರಣೀಯಗೊಳಿಸಬೇಕೆಂಬುದು ಸರ್ಕಾರದ ಮಹದಾಶಯ. ಅದಕ್ಕಾಗಿ ಬೆಳಗಾವಿಯಲ್ಲಿ **"ವಿಶ್ವ ಕನ್ನಡ ಸಮ್ಮೇಳನ"** ವನ್ನು ಇದೇ ಮಾರ್ಚ್ ತಿಂಗಳಿನಲ್ಲಿ ಆಯೋಜಿಸಲಾಗಿದೆ. ಇದನ್ನು ಅತ್ಯಂತ ಅರ್ಥಪೂರ್ಣವಾಗಿ ಆಚರಿಸುವುದು ಕರ್ನಾಟಕ ಸರ್ಕಾರದ ಆಶಯವಾಗಿದೆ. ಇದರ ಅಂಗವಾಗಿ ನಾಡಿನ ವಿವಿಧ ಕ್ಷೇತ್ರಗಳಲ್ಲಾಗಿರುವ ಪ್ರಗತಿಯ ಆತ್ಮಾವಲೋಕನದ ಜೊತೆಗೆ ಕನ್ನಡ ಸಾಹಿತ್ಯದ ಸೃಜನಶೀಲ ಮತ್ತು ಸೃಜನೇತರ ಪ್ರಕಾರಗಳ ೧೦೦ ಕೃತಿಗಳನ್ನು ಕನ್ನಡದ ಮೇರುಕೃತಿಗಳ ಮರುಮುದ್ರಣ ಯೋಜನೆಯಡಿ ಪ್ರಕಟಿಸಲಾಗುತ್ತಿದೆ. ಕನ್ನಡದ ಖ್ಯಾತ ಲೇಖಕರ ಮಹತ್ವದ ಕೃತಿಗಳನ್ನು ಪ್ರಕಟಿಸಿ, ಸುಲಭ ಬೆಲೆಯಲ್ಲಿ ಸಾಹಿತ್ಯಾಸಕ್ತರಿಗೆ ಒದಗಿಸುವ ಹಂಬಲ ನಮ್ಮದು.

ಈ ಸಾಹಿತ್ಯ ಮಾಲಿಕೆಯಲ್ಲಿನ ಕೃತಿರತ್ನಗಳನ್ನು ಕನ್ನಡಿಗರು ಸಹೃದಯತೆಯಿಂದ ಸ್ವಾಗತಿಸುವ ಮೂಲಕ ಇವುಗಳ ಪ್ರಯೋಜನವನ್ನು ಪಡೆದುಕೊಂಡರೆ ಸರ್ಕಾರದ ಈ ಯೋಜನೆ ಸಾರ್ಥಕವಾಗುತ್ತದೆ ಎಂದು ಭಾವಿಸುತ್ತೇನೆ.

ದಿನಾಂಕ ೨೪.೦೧.೨೦೧೧

**(ಬಿ.ಎಸ್. ಯಡಿಯೂರಪ್ಪ)**



ಕರ್ನಾಟಕ ಸರ್ಕಾರ

**ಗೋವಿಂದ ಎಂ. ಕಾರಜೋಳ**
ಕನ್ನಡ ಮತ್ತು ಸಂಸ್ಕೃತಿ,
ಸಣ್ಣ ನೀರಾವರಿ ಹಾಗೂ ಜವಳಿ ಸಚಿವರು

ವಿಧಾನಸೌಧ
ಬೆಂಗಳೂರು – ೦೧

# ಮುನ್ನುಡಿ

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ವಿಶ್ವ ಕನ್ನಡ ಸಮ್ಮೇಳನದ ಅಂಗವಾಗಿ ಸುಮಾರು ೧೦೦ ಕನ್ನಡದ ಮೇರುಕೃತಿಗಳನ್ನು ಮರುಮುದ್ರಿಸಲು ಉದ್ದೇಶಿಸಿರುತ್ತದೆ.

ಈ ಯೋಜನೆಯಡಿ ಕನ್ನಡ ಸಾಹಿತ್ಯದ ಬೇರೆ ಬೇರೆ ಕಾಲಘಟ್ಟಗಳಲ್ಲಿ ರಚನೆಗೊಂಡ ಕಥೆ, ಕಾದಂಬರಿ, ವಿಚಾರ ಸಾಹಿತ್ಯ, ಪ್ರಬಂಧ, ವಿಮರ್ಶೆ, ನಾಟಕ, ಕವನ ಸಂಕಲನ– ಹೀಗೆ ಸಾಹಿತ್ಯದ ವಿವಿಧ ಪ್ರಕಾರಗಳ ಕೆಲವು ಪ್ರಾತಿನಿಧಿಕ ಕೃತಿಗಳನ್ನು ಪ್ರಕಟಿಸಲಾಗುತ್ತಿದೆ. ಈ ಪ್ರಾತಿನಿಧಿಕ ಕೃತಿಗಳನ್ನು ಸರ್ಕಾರದಿಂದ ರಚಿತವಾದ ಆಯ್ಕೆ ಸಮಿತಿಯು ಮುದ್ರಣಕ್ಕೆ ಆಯ್ಕೆ ಮಾಡಿರುತ್ತದೆ. ಈ ಕೃತಿಗಳನ್ನು ಮುದ್ರಣಕ್ಕೆ ಆಯ್ಕೆ ಮಾಡಿದ ಆಯ್ಕೆ ಸಮಿತಿಯ ಎಲ್ಲಾ ವಿದ್ವಾಂಸರಿಗೂ ನನ್ನ ಧನ್ಯವಾದಗಳು. ಈ ಮಹತ್ವದ ಕೃತಿಗಳನ್ನು ಸಹೃದಯ ಕನ್ನಡಿಗರಿಗೆ ಸುಲಭ ಬೆಲೆಯಲ್ಲಿ ತಲುಪಿಸಬೇಕೆಂಬುದು ನಮ್ಮ ಹೆಗ್ಗುರಿಯಾಗಿರುತ್ತದೆ. ಕನ್ನಡ ಸಾಹಿತ್ಯದ ಮೈಲಿಗಲ್ಲುಗಳಾಗಿರುವ ಈ ಪುಸ್ತಕಗಳು ಭಾವಿ ಪೀಳಿಗೆಯವರಿಗೆ ದಾರಿದೀಪಗಳಾಗಿವೆ. ಈ ಕೃತಿಗಳ ಪ್ರಯೋಜನವನ್ನು ಕನ್ನಡ ಜನತೆ ಹಾಗೂ ವಿದ್ಯಾರ್ಥಿಗಳು ಪಡೆದರೆ ನಮ್ಮ ಶ್ರಮ ಸಾರ್ಥಕವೆಂದು ಭಾವಿಸುತ್ತೇನೆ.

ದಿನಾಂಕ ೧೮.೧.೨೦೧೧

**(ಗೋವಿಂದ ಎಂ. ಕಾರಜೋಳ)**

# ಎರಡು ನುಡಿ

ಕರ್ನಾಟಕ ಸರ್ಕಾರವು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವತಿಯಿಂದ 'ವಿಶ್ವ ಕನ್ನಡ ಸಮ್ಮೇಳನ'ದ ಅಂಗವಾಗಿ ಕನ್ನಡದ ಮೇರುಕೃತಿಗಳ ಮರುಮುದ್ರಣ ಯೋಜನೆಯಡಿ ಕನ್ನಡ ಸಾರಸ್ವತ ಲೋಕವನ್ನು ಶ್ರೀಮಂತಗೊಳಿಸಿರುವ ಸಾಹಿತಿಗಳ ಮಹತ್ವದ ಕೃತಿಗಳನ್ನು ಓದುಗರಿಗೆ ಒದಗಿಸಬೇಕೆಂಬ ಸದಾಶಯ ಹೊಂದಿರುತ್ತದೆ. ಈ ಯೋಜನೆಯಡಿ ಸುಮಾರು ೧೦೦ ಕೃತಿಗಳನ್ನು ಪ್ರಕಟಿಸಲು ಉದ್ದೇಶಿಸಿದೆ.

ಈ ಕೃತಿಗಳನ್ನು ಆಯ್ಕೆಮಾಡಲು ಖ್ಯಾತ ವಿದ್ವಾಂಸರಾದ ಪ್ರೊ. ಎಲ್.ಎಸ್. ಶೇಷಗಿರಿರಾವ್‌ರವರ ಅಧ್ಯಕ್ಷತೆಯಲ್ಲಿ ನಾಡಿನ ಹೆಸರಾಂತ ಸಾಹಿತಿ / ವಿದ್ವಾಂಸರುಗಳನ್ನೊಳಗೊಂಡ ಆಯ್ಕೆ ಸಮಿತಿಯನ್ನು ರಚಿಸಿದೆ. ಈ ಆಯ್ಕೆ ಸಮಿತಿಯು ಕನ್ನಡದ ಮೇರುಕೃತಿಗಳ ಮರುಮುದ್ರಣ ಯೋಜನೆಗೆ ಕನ್ನಡ ಸಾಹಿತ್ಯದ ವಿವಿಧ ಕಾಲಘಟ್ಟಗಳಲ್ಲಿ ಬಂದ ಪ್ರಾತಿನಿಧಿಕ ಕೃತಿಗಳನ್ನು ಆಯ್ಕೆ ಮಾಡಿರುತ್ತದೆ. ಆಯ್ಕೆ ಸಮಿತಿಯ ಅಧ್ಯಕ್ಷರು ಹಾಗೂ ಸದಸ್ಯರಿಗೆ ಸರ್ಕಾರದ ಪರವಾಗಿ ವಂದನೆಗಳು ಸಲ್ಲುತ್ತವೆ. ಈ ಪುಸ್ತಕಗಳನ್ನು ಹೊರತರಲು ಅನುಮತಿ ನೀಡಿ ಸಹಕರಿಸಿದ ಎಲ್ಲಾ ಲೇಖಕರು ಹಾಗೂ ಹಕ್ಕುದಾರರುಗಳಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ. ಕನ್ನಡದ ಮೇರುಕೃತಿ ಸಾಹಿತ್ಯ ಮಾಲಿಕೆಯನ್ನು ಓದುಗರು ಸ್ವಾಗತಿಸುತ್ತಾರೆಂದು ನಂಬಿದ್ದೇನೆ.

ದಿನಾಂಕ ೧೭.೦೧.೨೦೧೧

**(ರಮೇಶ್ ಬಿ.ಝಳಕಿ)**
ಸರ್ಕಾರದ ಕಾರ್ಯದರ್ಶಿಗಳು
ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ

# ಅಧ್ಯಕ್ಷರ ಮಾತು

ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಕನ್ನಡದ ಮೇರುಕೃತಿಗಳನ್ನು ಪುನರ್‌ಮುದ್ರಣ ಮಾಡಲು ಒಂದು ಯೋಜನೆಯನ್ನು ಕೈಗೊಂಡಿತು. ಕೃತಿಗಳ ಆಯ್ಕೆಗಾಗಿ ಸರ್ಕಾರವು ಒಂದು ಸಮಿತಿಯನ್ನು ರಚಿಸಿತು. ಈ ಮಹತ್ವದ ಯೋಜನೆಯ ಸಮಿತಿಯ ಅಧ್ಯಕ್ಷನಾಗಿ ಕಾರ್ಯನಿರ್ವಹಿಸುವ ಸುಯೋಗ ನನ್ನದಾಯಿತು.

ಈ ಯೋಜನೆಯ ಮಹತ್ವವನ್ನು ನಾನು ವಿವರಿಸುವ ಅಗತ್ಯವಿಲ್ಲ. ಕನ್ನಡದ ಶ್ರೇಷ್ಠ ಕೃತಿಗಳನ್ನು ಸುಲಭ ಬೆಲೆಗೆ ಕನ್ನಡಿಗರ ಕೈಗಳಲ್ಲಿರಿಸಲು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಹಲವು ಯೋಜನೆಗಳನ್ನು ಕೈಗೊಂಡಿರುವುದಕ್ಕಾಗಿ ಸರ್ಕಾರವನ್ನೂ ಇಲಾಖೆಯನ್ನೂ ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಕನ್ನಡ ಸಂಸ್ಕೃತಿಗೆ ಈ ಯೋಜನೆಗಳು ಮಹತ್ವದ ಕೊಡುಗೆಯನ್ನು ನೀಡುತ್ತವೆ.

ಕನ್ನಡದ ಮೇರುಕೃತಿಗಳನ್ನು ಆರಿಸುವುದು ಸುಲಭದ ಕೆಲಸವಲ್ಲ. ಇಂತಹ ಆಯ್ಕೆಯಲ್ಲಿ ಬೇರೆ ಬೇರೆ ಅಭಿಪ್ರಾಯಗಳಿಗೆ ಸಾಧಾರವಾಗಿಯೇ ಅವಕಾಶವಿರುತ್ತದೆ. ಕನ್ನಡ ನಾಡಿನ ಶ್ರೇಷ್ಠ ಸಾಹಿತಿಗಳು ಈ ಸಮಿತಿಯ ಸದಸ್ಯರಾಗಿದ್ದದ್ದು ಸುದೈವದ ಸಂಗತಿ. ಕೃತಿಗಳನ್ನು ಚರ್ಚಿಸಿ ಮಹತ್ವದ ನಿರ್ಧಾರಕ್ಕೆ ಬಂದ ಸಮಿತಿಯು ಸಾಧ್ಯವಾದ ಕಾರ್ಯವನ್ನು ಸಾಧಿಸಿದೆ. ಇದಕ್ಕಾಗಿ ನಾನು ಸಮಿತಿಯ ಎಲ್ಲ ಸದಸ್ಯರಿಗೂ ಕೃತಜ್ಞನಾಗಿದ್ದೇನೆ.

ಈ ಕಾರ್ಯದ ನಿರ್ವಹಣೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರಾದ ಶ್ರೀ ಮನು ಬಳಿಗಾರ್ ಅವರು ನೆರವಾಗಿದ್ದಾರೆ. ಅವರ ಮತ್ತು ಅವರ ಸಿಬ್ಬಂದಿಯವರ ಅಮೂಲ್ಯ ಸಹಕಾರಕ್ಕೆ ನಾನು ಕೃತಜ್ಞ.

ಕನ್ನಡ ನಾಡಿನ ಮನೆಮನೆಗಳಲ್ಲಿ ಸಾಹಿತ್ಯದ ಮಂಗಳ ದೀಪದ ಬೆಳಕನ್ನು ಹರಡುವ ಈ ಯೋಜನೆಯ ಪೂರ್ಣಪ್ರಯೋಜನವನ್ನು ಕನ್ನಡಿಗರು ಪಡೆದುಕೊಳ್ಳಲಿ ಎಂದು ಹಾರೈಸುತ್ತೇನೆ.

ಸಿರಿಗನ್ನಡಂ ಗೆಲ್ಗೆ!

**ಎಲ್.ಎಸ್. ಶೇಷಗಿರಿ ರಾವ್**

ಅಧ್ಯಕ್ಷ

ದಿನಾಂಕ ೧೬.೧೨.೨೦೧೦ ಕನ್ನಡದ ಮೇರುಕೃತಿಗಳ ಆಯ್ಕೆ ಸಮಿತಿ

# ಪ್ರಕಾಶಕರ ಮಾತು

ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಕನ್ನಡದ ಮೇರುಕೃತಿಗಳ ಮರುಮುದ್ರಣ ಯೋಜನೆಯಡಿ 'ವಿಶ್ವ ಕನ್ನಡ ಸಮ್ಮೇಳನ'ದ ಅಂಗವಾಗಿ ಸುಮಾರು ನೂರು ಪುಸ್ತಕಗಳನ್ನು ಪ್ರಕಟಿಸಲು ಉದ್ದೇಶಿಸಿರುತ್ತದೆ. ಈ ಯೋಜನೆಯಡಿ ಹಳಗನ್ನಡ, ನಡುಗನ್ನಡ ಮತ್ತು ಹೊಸಗನ್ನಡ ಈ ಮೂರೂ ಕಾಲಘಟ್ಟಗಳಲ್ಲಿ ರಚನೆಗೊಂಡ, ಕನ್ನಡದಲ್ಲಿ ಮಹತ್ವದ ಕೃತಿಗಳೆಂದು ಪರಿಗಣಿತವಾಗಿರುವ ಪುಸ್ತಕಗಳನ್ನು ಸರ್ಕಾರವು ನೇಮಿಸಿರುವ ಆಯ್ಕೆ ಸಮಿತಿಯು ಮರುಮುದ್ರಣಕ್ಕೆ ಆಯ್ಕೆ ಮಾಡಿರುತ್ತದೆ. ಈ ಸಾಹಿತ್ಯ ಮಾಲೆಯಲ್ಲಿ ಈಗಾಗಲೇ ಇಲಾಖೆಯು ಸಮಗ್ರ ಸಾಹಿತ್ಯ ಪ್ರಕಟಣೆಯಡಿ ಪ್ರಕಟಿಸಿರುವ ಲೇಖಕರ ಕೃತಿಗಳನ್ನು ಪರಿಗಣಿಸಿರುವುದಿಲ್ಲ.

ಕನ್ನಡದ ಮೇರುಕೃತಿಗಳ ಮರುಮುದ್ರಣಕ್ಕೆ ಪುಸ್ತಕಗಳನ್ನು ಆಯ್ಕೆ ಮಾಡಿದ ಆಯ್ಕೆ ಸಮಿತಿಯ ಅಧ್ಯಕ್ಷರಾದ ಪ್ರೊ. ಎಲ್.ಎಸ್. ಶೇಷಗಿರಿ ರಾವ್‌ರವರಿಗೆ ಹಾಗೂ ಸಮಿತಿಯು ಸದಸ್ಯರುಗಳಾದ ಡಾ. ಚಂದ್ರಶೇಖರ ಕಂಬಾರ, ಡಾ. ಹಂಪ ನಾಗರಾಜಯ್ಯ, ಡಾ. ಎಂ.ಎಂ.ಕಲಬುರ್ಗಿ, ಡಾ. ದೊಡ್ಡರಂಗೇಗೌಡ, ಡಾ. ಎಚ್.ಜೆ. ಲಕ್ಕಪ್ಪಗೌಡ, ಡಾ. ಅರವಿಂದ ಮಾಲಗತ್ತಿ, ಡಾ. ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ, ಡಾ. ಪಿ.ಎಸ್. ಶಂಕರ್, ಶ್ರೀಮತಿ ಸಾರಾ ಅಬೂಬಕರ್, ಡಾ. ಪ್ರಧಾನ್ ಗುರುದತ್ತ ಇವರುಗಳಿಗೆ ನನ್ನ ಕೃತಜ್ಞತೆಗಳು. ಈ ಯೋಜನೆಯಡಿ ಮರುಮುದ್ರಣಕ್ಕೆ ಆಯ್ಕೆಯಾಗಿರುವ ಪುಸ್ತಕಗಳ ಮುದ್ರಣಕ್ಕೆ ಅನುಮತಿ ನೀಡಿದ ಎಲ್ಲ ಲೇಖಕರಿಗೂ, ಹಕ್ಕುದಾರರಿಗೂ ಮತ್ತು ಕರಡಚ್ಚು ತಿದ್ದಿದವರಿಗೂ ನನ್ನ ವಂದನೆಗಳು.

ಸದರಿ ಪ್ರಕಟಣಾ ಯೋಜನೆಯ ಪುಸ್ತಕಗಳನ್ನು ಹೊರತರಲು ಸಹಕರಿಸಿದ ಶ್ರೀ ಎಚ್. ಶಂಕರಪ್ಪ, ಜಂಟಿ ನಿರ್ದೇಶಕರು, (ಸು.ಕ.), ಶ್ರೀಮತಿ ವೈ.ಎಸ್.ವಿಜಯಲಕ್ಷ್ಮಿ, ಸಹಾಯಕ ನಿರ್ದೇಶಕರು ಹಾಗೂ ಪ್ರಕಟಣಾ ಶಾಖೆಯ ಸಿಬ್ಬಂದಿಗೆ ನನ್ನ ನೆನಕೆಗಳು. ವಿಶ್ವ ಕನ್ನಡ ಸಮ್ಮೇಳನದ ಲಾಂಛನವನ್ನು ಸಿದ್ಧಪಡಿಸಿಕೊಟ್ಟ ಹಿರಿಯಕಲಾವಿದರಾದ ಶ್ರೀ ಸಿ. ಚಂದ್ರಶೇಖರ ಅವರಿಗೂ ನನ್ನ ನೆನಕೆಗಳು ಹಾಗೂ ಈ ಪುಸ್ತಕಗಳನ್ನು ಸುಂದರವಾಗಿ ಮುದ್ರಿಸಿಕೊಟ್ಟಿರುವ ಮಯೂರ ಪ್ರಿಂಟ್ ಆ್ಯಡ್ಸ್‌ನ ಮಾಲೀಕರಾದ

ಶ್ರೀ ಬಿ.ಎಲ್. ಶ್ರೀನಿವಾಸ್ ಮತ್ತು ಸಿಬ್ಬಂದಿ ವರ್ಗದವರಿಗೂ ನನ್ನ ನೆನಕೆಗಳು.

ಕನ್ನಡದ ಮೇರುಕೃತಿಗಳ ಮರುಮುದ್ರಣ ಯೋಜನೆಯಡಿ ಕನ್ನಡ ಓದುಗರಿಗೆ ಹಲವಾರು ವರ್ಷಗಳಿಂದ ದೊರಕದೇ ಇದ್ದ ಎಷ್ಟೋ ಪುಸ್ತಕಗಳು ಲಭ್ಯವಾಗುತ್ತಿರುವುದು ಹೆಮ್ಮೆಯ ಸಂಗತಿ. ಕನ್ನಡದ ಮೇರುಕೃತಿಗಳ ಮರುಮುದ್ರಣ ಯೋಜನೆಯಡಿ ಸಾಹಿತ್ಯಾಭಿಮಾನಿಗಳಿಗೆ ಅಕ್ಷರದಾಸೋಹ ನಡೆಸುವ ಆಶಯ ನಮ್ಮದು. ಈ ಕೃತಿಗಳನ್ನು ಕನ್ನಡಿಗರು ಸ್ವಾಗತಿಸುತ್ತಾರೆಂದು ನಂಬಿದ್ದೇನೆ.

ಮನು ಬಳಿಗಾರ್

ದಿನಾಂಕ ೧೧.೦೧.೨೦೧೧

ನಿರ್ದೇಶಕರು

ಕನ್ನಡ ಮತ್ತು ಸಂಸ್ಕೃತಿ ಇಲಾಖೆ

# ಕನ್ನಡದ ಮೇರುಕೃತಿಗಳ ಆಯ್ಕೆ ಸಮಿತಿ

**ಅಧ್ಯಕ್ಷರು**

ಪ್ರೊ. ಎಲ್.ಎಸ್. ಶೇಷಗಿರಿರಾವ್

**ಸದಸ್ಯರು**

ಡಾ॥ ಚಂದ್ರಶೇಖರ ಕಂಬಾರ

ಡಾ॥ ಎಂ.ಎಂ. ಕಲಬುರ್ಗಿ

ಡಾ॥ ದೊಡ್ಡರಂಗೇಗೌಡ

ಡಾ॥ ಅರವಿಂದ ಮಾಲಗತ್ತಿ

ಡಾ॥ ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ

ಡಾ॥ ಪ್ರಧಾನ್ ಗುರುದತ್ತ

ಡಾ॥ ಹಂಪ ನಾಗರಾಜಯ್ಯ

ಡಾ॥ ಎಚ್.ಜೆ. ಲಕ್ಕಪ್ಪಗೌಡ

ಶ್ರೀಮತಿ ಸಾರಾ ಅಬೂಬಕರ್

ಡಾ॥ ಪಿ.ಎಸ್. ಶಂಕರ್

**ಸದಸ್ಯ ಕಾರ್ಯದರ್ಶಿ**

ಶ್ರೀ ಮನು ಬಳಿಗಾರ್, ಕ.ಆ.ಸೇ.

ನಿರ್ದೇಶಕರು

ಕನ್ನಡ ಮತ್ತು ಸಂಸ್ಕೃತಿ ಇಲಾಖೆ

# ಪ್ರಸ್ತಾವನೆ

**ಶತಕ ಸಾಹಿತ್ಯ :**

ಕನ್ನಡ ಸಾಹಿತ್ಯದ ರೂಪವೈವಿಧ್ಯಕ್ಕೆ ಕಾರಣವಾದ ಸಾಹಿತ್ಯ ಪ್ರಕಾರಗಳಲ್ಲಿ 'ಶತಕ'ವೂ ಒಂದು. ಇದು ಸಂಸ್ಕೃತ ಸಾಹಿತ್ಯದಿಂದ ಪಡೆದ ಒಂದು ವಿಶಿಷ್ಟ ಕಿರಿಯ ಸಾಹಿತ್ಯ ಪ್ರಕಾರ. ಪದ್ಯ ಸಂಖ್ಯೆಯ ಹಿನ್ನೆಲೆಯಲ್ಲಿ ಸಾರ್ಥಕ ಹೆಸರನ್ನು ಹೊಂದಿದ ಇದರಲ್ಲಿ ನೂರು ಪದ್ಯಗಳಿರುವುದು ಮೊದಲ ಲಕ್ಷಣ. ಭಕ್ತಿ, ಜ್ಞಾನ, ವೈರಾಗ್ಯ, ತತ್ವ, ನೀತಿ, ಶೃಂಗಾರ, ಸ್ತುತಿ, ಮಹಾತ್ಮರ ಸ್ತೋತ್ರ, ಮಹಿಮಾತಿಶಯಗಳ ವರ್ಣನೆ ಇದರ ವಸ್ತು. ಅಕ್ಷರ ಸಮವೃತ್ತಗಳ ಬಳಕೆ, ಸಂಸ್ಕೃತ ಭೂಯಿಷ್ಠ ಭಾಷೆ, ಪ್ರತಿ ವೃತ್ತಾಂತ್ಯದಲ್ಲಿ ಅಂಕಿತವಿರುವುದು ಇದರ ಇತರ ಲಕ್ಷಣಗಳು. ವ್ಯಕ್ತಿಯ ಚಾರಿತ್ರ್ಯ ಶುದ್ಧಿ, ಸಮಾಜ ಸ್ವಾಸ್ಥ್ಯ, ಭಕ್ತಿಭಾವದ ಉದ್ದೀಪನ, ಅರಿವಿನ ವಿಸ್ತರಣೆ, ತತ್ವದ ಪ್ರತಿಪಾದನೆ ಇದರ ಉದ್ದೇಶ.

ಕನ್ನಡದಲ್ಲಿ ಶತಕ ಸಾಹಿತ್ಯದ ಪರಂಪರೆ ೧೧ನೆಯ ಶತಮಾನದಿಂದ ಆರಂಭವಾಗುತ್ತದೆ. ಜೈನಕವಿ ನಾಗವರ್ಮಾಚಾರ್ಯ (೧೦೭೦) ಬರೆದ 'ಚಂದ್ರಚೂಡಾಮಣಿ ಶತಕ'ವೇ ಈಗ ದೊರೆತ ಮೊದಲ ಶತಕಕೃತಿ. ಮುಂದೆ ಕರ್ನಾಟಕದ ಪ್ರಮುಖ ಧರ್ಮಗಳಾದ ಜೈನ–ಲಿಂಗಾಯತ ಮತ್ತು ಬ್ರಾಹ್ಮಣ ಕವಿಗಳಿಂದ ಈ ಪ್ರಕಾರದಲ್ಲಿ ವಿಪುಲ ಸಾಹಿತ್ಯ ಸೃಷ್ಟಿ ನಡೆಯಿತು. ಸು. ೪೦೦ಕ್ಕೂ ಹೆಚ್ಚು ಕೃತಿಗಳು ಲಭ್ಯವಾಗಿರುವುದು ಅದರ ಸಂಖ್ಯಾಬಲ ಮತ್ತು ಜನಪ್ರಿಯತೆಯನ್ನು ಸೂಚಿಸುತ್ತದೆ. ಅದರಲ್ಲಿಯೇ ಲಿಂಗಾಯತ ಕವಿಗಳ ಕೊಡುಗೆ ವಿಶೇಷ ಮತ್ತು ವಿಶಿಷ್ಟವಾದುದು. ಇನ್ನೂರಕ್ಕೂ ಹೆಚ್ಚು ಶತಕ ಕೃತಿಗಳು ಅವರಿಂದ ರಚನೆಗೊಂಡಿವೆ. ಅವು ವಸ್ತು–ರೂಪ–ಭಾಷೆ–ಆಶಯಗಳ ದೃಷ್ಟಿಯಿಂದ ವೈವಿಧ್ಯತೆಯನ್ನು ಸಾಧಿಸಿ, ನೂತನ ಆವಿಷ್ಕಾರಕ್ಕೆ ಕಾರಣವಾಗಿವೆ.

ಪದ್ಯಗಳ ಸಂಖ್ಯೆ ೧೦೦ ರಿಂದ ೧೨೫ ರವರೆಗೆ ಬೆಳೆದಿದೆ. ಅಕ್ಷರ ಸಮವೃತ್ತಗಳ ಜೊತೆಗೆ ಕಂದ, ಷಟ್ಪದಿ, ತ್ರಿಪದಿ, ಸಾಂಗತ್ಯ, ಚೌಪದಿ ಮೊದಲಾದ ಛಂದೋರೂಪಗಳು ಎಡೆಪಡೆದಿವೆ. ಭಾಷೆಯಲ್ಲಿ ಸರಳತೆ, ದೇಶೀಯತೆ ಮೈದಾಳಿದೆ. ವಸ್ತುವಿನಲ್ಲಿ ಭಕ್ತಿ–ಜ್ಞಾನ–ವೈರಾಗ್ಯ, ಶಿವಸ್ತುತಿ, ಶರಣಸ್ತುತಿ, ಶರಣತತ್ವ, ಲೋಕನೀತಿ ಸ್ಥಾನಪಡೆದಿವೆ. ಬಸವಾದಿಶರಣರು ಪ್ರತಿಪಾದಿಸಿದ ಸಕಲಜೀವಾತ್ಮರಿಗೆ

ಲೇಸನ್ನುಂಟುಮಾಡಬೇಕೆಂಬ ಉದಾತ್ತ ಮೌಲ್ಯಗಳು ಅವುಗಳ ಮುಖ್ಯ ಧ್ಯೇಯ–ಧೋರಣೆಗಳಾಗಿವೆ.

ಸದ್ಯ ಲಿಂಗಾಯತ ಶತಕಕಾರರಲ್ಲಿ ಕೊಂಡಗುಳಿ ಕೇಶಿರಾಜ (೧೧೦೭) ನೇ ಮೊದಲಿಗನೆಂದು ಹೇಳಲಾಗುತ್ತದೆ. ಆತ ರಚಿಸಿದ ಮಂತ್ರಮಹತ್ವದಕಂದ, ಲಿಂಗಮಹತ್ವದಕಂದ, ಶೀಲಮಹತ್ವದಕಂದ ಕೃತಿಗಳು ಮೊದಲ ಶತಕಗಳೆಂದು ತಿಳಿಯಲಾಗಿದೆ. ಆದರೆ ಅವುಗಳಿಗೆ 'ಶತಕ' ಎಂದು ಕರೆದಿಲ್ಲ. ಮುಂದೆ ಕಂದ ರೂಪದಲ್ಲಿ ಶತಕಗಳು ರಚನೆಯಾಗಿರುವುದನ್ನು ಗಮನಿಸಿದರೆ–ಶತಕ ಕೃತಿಗಳ ಎಲ್ಲ ಲಕ್ಷಣಗಳನ್ನು ಒಳಗೊಂಡಿರುವ ಈ ಕಂದ ಕೃತಿಗಳನ್ನು ಶತಕಗಳೆಂದು ಪರಿಗಣಿಸುವುದು ಉಚಿತವೆನಿಸುತ್ತದೆ.

ಇನ್ನು 'ಶತಕ' ಎಂಬ ಹೆಸರನ್ನು ಶಿರೋನಾಮೆಯಲ್ಲಿಯೇ ಧರಿಸಿ–ಸಂಸ್ಕೃತ ಶತಕ ಕೃತಿಗಳ ಎಲ್ಲ ಲಕ್ಷಣಗಳನ್ನೂ ಅಳವಡಿಸಿಕೊಂಡು ರಚಿತವಾದ ಲಿಂಗಾಯತ ಮೊದಲ ಕೃತಿಗಳೆಂದರೆ ಹರಿಹರ (೧೨೫೦) ಕವಿಯ ರಕ್ಷಾಶತಕ ಮತ್ತು ಪಂಪಾಶತಕ. ತುಂಬ ಪ್ರಸಿದ್ಧವಾದ ಅವುಗಳಲ್ಲಿ ಕವಿಯ ಆತ್ಮಕಥನ ಮತ್ತು ವಿರೂಪಾಕ್ಷಸ್ತುತಿ ನಿರೂಪಿತವಾಗಿವೆ.

ಅನಂತರದಲ್ಲಿ, ಅದರಲ್ಲಿಯೇ ಲಿಂಗಾಯತ ಸಾಹಿತ್ಯದ ಪುನರುಜ್ಜೀವನ ಕಾಲವೆನಿಸಿದ ೧೫ನೆಯ ಶತಮಾನದ ನಂತರದಲ್ಲಿ ಶತಕ ಕೃತಿಗಳ ಸೃಷ್ಟಿಕಾರ್ಯ ಎಡೆಬಿಡದೆ ನಡೆಯಿತು. ಗುಮ್ಮಟಾರ್ಯ, ಪುಲಿಗೆರೆಯ ಸೋಮೇಶ, ಮೊಗ್ಗೆಯ ಮಾಯಿದೇವ, ಚಂದ್ರಕವಿ, ವೀರಭದ್ರರಾಜ, ಶಾಂತಮಲ್ಲ, ಸಿರಿನಾಮಧೇಯ, ಶಂಕರದೇವ, ಶಾಂತವೃಷಭೇಶ, ಶಾಂತಾಚಾರ್ಯ, ವಿರಕ್ತತೋಂಟದಾರ್ಯ, ಯೋಗಾನಂದ, ನಿಜಲಿಂಗಾರಾಧ್ಯ ಮೊದಲಾದವರು ಉತ್ತಮೋತ್ತಮ ಕೃತಿಗಳನ್ನು ರಚಿಸಿರುವರು. ಅವುಗಳಲ್ಲಿ ಸತ್ವ–ತತ್ವ–ಶೈಲಿಯ ಸುಭಗತೆಯ ದೃಷ್ಟಿಯಿಂದ ಹೆಚ್ಚು ಜನಪ್ರಿಯವೆನಿಸಿ ಪ್ರಸಿದ್ಧಿಯನ್ನು ಪಡೆದ ಕೃತಿಗಳೆಂದರೆ ಹರಿಹರನ ರಕ್ಷಾಶತಕ–ಪಂಪಾಶತಕ, ಮೊಗ್ಗೆಯ ಮಾಯಿದೇವನ ಶತಕತ್ರಯ (ಶಿವಾಧವಶತಕ, ಶಿವಾವಲ್ಲಭಶತಕ ಮಹದೈಪುರೀಶ್ವರಶತಕ) ಮತ್ತು ಲಿಂಗಣಾರಾಧ್ಯನ ನಿಜಲಿಂಗಶತಕ.

* * *

ಪ್ರಸ್ತುತ ಸಂಪುಟದಲ್ಲಿ ಲಿಂಗಾಯತ ಕವಿಗಳು ರಚಿಸಿದ ನಾಲ್ಕು ಶತಕಗಳನ್ನು ಅಳವಡಿಸಲಾಗಿದೆ: ೧. ರಕ್ಷಾಶತಕ, ೨. ಪಂಪಾಶತಕ, ೩. ಸೋಮೇಶ್ವರ ಶತಕ, ೪. ನಿಜಲಿಂಗಶತಕ. ಮೊದಲ ಎರಡರ ಕರ್ತೃ ಹರಿಹರ; ಮೂರು ಮತ್ತು ನಾಲ್ಕರ ಕರ್ತೃಗಳು ಪುಲಿಗೆರೆಯ ಸೋಮ ಮತ್ತು ನಿಜಲಿಂಗಾರಾಧ್ಯ.

## ಹರಿಹರ

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಗಳಿಸಿಕೊಂಡ ಹರಿಹರ ಯುಗಪ್ರವರ್ತಕ, ಋಷಿಕವಿ, ಭಕ್ತಕವಿ, ಮಹಾಕವಿ, ಕ್ರಾಂತಿಕಾರಿಕವಿ, ಹೊಸಯುಗದ ಹರಿಕಾರ ಎಂದೆಲ್ಲ ಕರೆಯಿಸಿಕೊಂಡಿದ್ದಾನೆ. ಇದಕ್ಕೆ ಅವನ ಬದುಕು-ರಚಿಸಿದ ಕೃತಿಗಳು-ಸಾಹಿತ್ಯ ಕ್ಷೇತ್ರದಲ್ಲಿ (ವಸ್ತು-ರೂಪ-ಭಾಷೆ-ಧೋರಣೆಗಳ ದೃಷ್ಟಿಯಿಂದ) ಆತ ಉಂಟುಮಾಡಿದ ಬದಲಾವಣೆ, ತೋರಿದ ಮಾರ್ಗ, ಬೀರಿದ ಪ್ರಭಾವಗಳು ಕಾರಣವಾಗಿವೆ. ಈತನ ಜೀವನ ಚರಿತ್ರೆಗೆ ಸಂಬಂಧಿಸಿದ ವಿವರಗಳನ್ನು ಈಗಾಗಲೇ ಶೋಧಿತವಾದ ಸಂಗತಿಗಳ ಹಿನ್ನೆಲೆಯಲ್ಲಿ ಹೀಗೆ ಕ್ರೋಡೀಕರಿಸಬಹುದು.

ಕರ್ನಾಟಕದ ಸುಪ್ರಸಿದ್ಧ ಸಾಂಸ್ಕೃತಿಕ ಕ್ಷೇತ್ರವೆನಿಸಿದ ಹಂಪೆ, ಹರಿಹರನ ಬದುಕನ್ನು ರೂಪಿಸಿದ ಮಹತ್ವದ ಸ್ಥಳ. ಈತನ ಹುಟ್ಟೂರು ಬಹುಶಃ ಹಳೇಬೀಡಿನ ಹತ್ತಿರದ ಯಾವುದಾದರೊಂದು ಹಳ್ಳಿಯಾಗಿರಬೇಕು. ಹಳೆಬೀಡಿನ ಹೊಯ್ಸಳರಲ್ಲಿ ಆತ ಮೊದಲು ಕರಣಿಕನಾಗಿದ್ದು, ಪ್ರಸಿದ್ಧ ದೈವತ ವಿರೂಪಾಕ್ಷನ ಸನ್ನಿಧಿ ಕಾರಣವಾಗಿ ಹಂಪೆಗೆ ಬಂದಿರಬೇಕು. ಅಲ್ಲಿನ ಗುರುಗಳಾದ ಹಂಪೆಯ ಮಾಯಿದೇವರಿಂದ ದೀಕ್ಷೆ ಪಡೆದು ಅಲ್ಲಿಯೇ ನೆಲೆನಿಂತಿರಬೇಕು-ಎಂದು ಡಾ. ಎಂ. ಎಂ. ಕಲಬುರ್ಗಿ ಅವರು ಅಭಿಪ್ರಾಯಪಡುತ್ತಾರೆ (ಹರಿಹರನ ರಗಳೆಗಳು-ಕನ್ನಡ ವಿಶ್ವವಿದ್ಯಾಲಯ ಹಂಪಿ, ಪೀಠಿಕೆ, ಪುಟ ೮). ಹಂಪೆಯಲ್ಲಿಯೇ ಈತ ಬಹುಕಾಲ ಇದ್ದು, ಅಲ್ಲಿಯೇ ಐಕ್ಯನಾಗಿರುವುದರಿಂದ, ತನ್ನ ಕೃತಿಗಳಲ್ಲಿ ಹಂಪೆಯನ್ನು ವಿಶೇಷವಾಗಿ ಉಲ್ಲೇಖಿಸಿರುವುದರಿಂದ, ಅನ್ಯ ಕವಿಗಳು ಹಂಪೆಯ ವಿಶೇಷಣ ಹಚ್ಚಿ ಆತನನ್ನು ಕರೆಯುವುದರಿಂದ 'ಹಂಪೆಯ ಹರಿಹರ'ನೆಂದೇ ಹೆಚ್ಚು ಪ್ರಸಿದ್ಧಿಯನ್ನು ಪಡೆದಿದ್ದಾನೆ.

ಹರಿಹರನ ತಂದೆ ಮಾಯಿದೇವ, ತಾಯಿ ಶರ್ವಾಣಿ, ತಂಗಿ ರುದ್ರಾಣಿ. ಈಕೆಯ ಮಗ ರಾಘವಾಂಕ. ಅಂದರೆ ಹರಿಹರನ ಸೋದರಳಿಯ ರಾಘವಾಂಕ. ಇಬ್ಬರೂ ನೂತನ ಸಾಹಿತ್ಯ ಸಂಪ್ರದಾಯದ ಸಂಸ್ಥಾಪಕರು. ಕನಸಿನಲ್ಲಿಯೂ ಅನ್ಯದೇವರನ್ನು ಹೊಗಳದ ವೀರವ್ರತ ಹರಿಹರನದು. ಅವನ ಕೌಟುಂಬಿಕ ಪರಂಪರೆ -ಪರಿಸರಗಳದು ನಿಷ್ಠುರ ಶಿವಭಕ್ತಿ. ಈತ ಮೂಲತಃ ಶುದ್ಧ ಶೈವನಾಗಿದ್ದು ಅನಂತರ ವೀರಶೈವನಾಗಿರಬೇಕೆಂದು ತಿಳಿದುಬರುತ್ತದೆ. ಹಂಪೆಯ ವಿರೂಪಾಕ್ಷ ಈತನ ಇಷ್ಟದೈವ. ಈತನನ್ನು ತನ್ನೆಲ್ಲ ಕೃತಿಗಳಲ್ಲಿ ಅನನ್ಯ ಭಕ್ತಿಯಿಂದ ಸ್ತುತಿಸಿದ್ದಾನೆ.

ಹರಿಹರನನ್ನು ಕುರಿತು ಅನೇಕ ದಂತಕಥೆಗಳು ಹುಟ್ಟಿಕೊಂಡಿವೆ. ಹೊಯ್ಸಳರ ಆಸ್ಥಾನದಲ್ಲಿದ್ದಾಗ ಹಂಪೆಯ ವಿರೂಪಾಕ್ಷನ ತೆರೆಗೆ ಹತ್ತಿದ ಉರಿಯನ್ನು ಅಂಗೈಯಿಂದ ತಿಕ್ಕಿ ಆರಿಸಿ ರಾಜಗೌರವ ಪಡೆದದ್ದು; ಹರಿಹರ ಗ್ರಾಮದ ಹರಿಹರೇಶ್ವರ ದೇವಸ್ಥಾನದಲ್ಲಿ

ಸೇರಿದ್ದ ಭೂತವನ್ನು ಓಡಿಸಿ, ೧೨ ವರ್ಷಗಳಿಂದ ಸ್ಥಗಿತವಾಗಿದ್ದ ಪೂಜೆಗೆ ಮರುಚಾಲನೆಕೊಟ್ಟದ್ದು– ಇವು ಅವುಗಳಲ್ಲಿ ಪ್ರಮುಖವಾದುವು.

ಹರಿಹರ ಸಾಹಿತ್ಯ ಕ್ಷೇತ್ರದಲ್ಲಿ ಅದ್ಭುತವಾದ ಬದಲಾವಣೆಯನ್ನುಂಟು ಮಾಡಿದ ಕ್ರಾಂತಿಕಾರಿ ಕವಿ. ಪುರಾಣದ ವ್ಯಕ್ತಿಗಳಿಗಾಗಿ, ರಾಜರ ಸ್ತುತಿಗಾಗಿ ಬಳಕೆಯಾಗುತ್ತಿದ್ದ ಕಾವ್ಯಶಕ್ತಿಯನ್ನು ಶಿವಲೀಲೆ ವರ್ಣನೆಗಾಗಿ, ಶಿವಶರಣರ ಭಕ್ತಿಚರಿತ್ರೆಯ ನಿರೂಪಣೆಗಾಗಿ ಬಳಸಿಕೊಂಡು 'ಕಾವ್ಯವಸ್ತು'ವಿನಲ್ಲಿ ಅಪೂರ್ವವಾದ ಬದಲಾವಣೆ ಉಂಟು ಮಾಡಿದನು. ಸಂಸ್ಕೃತ ಅಕ್ಷರವೃತ್ತ, ಕಂದ, ಗದ್ಯಗಳಿಂದ ಸಮ್ಮಿಶ್ರವಾಗಿದ್ದ, ಪಂಡಿತ ಮಾನ್ಯ ಚಂಪೂರೂಪವನ್ನು ಕೈಬಿಟ್ಟು, ಸರ್ವರಿಗೂ ಸುಲಭ ಗ್ರಾಹ್ಯವಾದ ರಗಳೆರೂಪವನ್ನು ಕಾವ್ಯಮಾಧ್ಯಮವನ್ನಾಗಿ ಮಾಡಿಕೊಂಡು ಅದರ ಸಾಧ್ಯತೆಗಳನ್ನೆಲ್ಲ ಸೂರೆಗೈದು–'ಸಾಹಿತ್ಯರೂಪ'ದಲ್ಲಿ ಪರಿವರ್ತನೆಯನ್ನು ತಂದನು. ಚಂಪೂ ಕಾವ್ಯದಲ್ಲಿ ಬಳಕೆಯಾಗುತ್ತಿದ್ದ ಸಂಸ್ಕೃತ ಭೂಯಿಷ್ಠ ಹಳೆಗನ್ನಡ ಭಾಷೆಯನ್ನು ತ್ಯಜಿಸಿ ನಡುಗನ್ನಡದ ಸರಳಭಾಷೆಯಲ್ಲಿ ಕಾವ್ಯರಚನೆ ಮಾಡಿ–'ಭಾಷಾಬಳಕೆ'ಯಲ್ಲಿ ನೂತನತೆಯನ್ನು ನಿರೂಪಿಸಿದನು. ಹಾಗೆಯೇ ಕಾವ್ಯಶೈಲಿ, ಕಾವ್ಯಶಿಲ್ಪ, ಕಾವ್ಯ ರಚನಾತಂತ್ರ, ಕಥಾ ವಿನ್ಯಾಸಗಳಲ್ಲಿಯೂ ಹೊಸತನವನ್ನು ತಂದು, ಹೊಸ ಸಾಹಿತ್ಯ ಮಾರ್ಗದ ನಿರ್ಮಾಪಕನೆನಿಸಿದನು. ಮುಂದಿನ ಲಿಂಗಾಯತ ಕವಿಗಳಿಗೆ ಅದು 'ಹರಿಹರನ ಉದಿತೋದಿತ ಮಾರ್ಗ' ಎಂದು ಹೆದ್ದಾರಿಯಾಗಿ ಪರಿಣಮಿಸಿತು.

ಹರಿಹರನ ಸಾಹಿತ್ಯ ಸೃಷ್ಟಿ ವಿಪುಲವಾಗಿದೆ; ಶ್ರೀಮಂತವೆನಿಸಿದೆ. ಆತನ ಕೃತಿಗಳ ಸಂಖ್ಯಾ ನಿರ್ಣಯ ಒಂದು ಸಮಸ್ಯೆಯಾಗಿ ಗಿರಿಜಾ ಕಲ್ಯಾಣ, ರಕ್ಷಾಶತಕ, ಪಂಪಾಶತಕ, ಮುಡಿಗೆ ಅಷ್ಟಕ ಮತ್ತು ರಗಳೆಗಳು ಈತನ ಕೃತಿಗಳೆಂಬುದು ಎಲ್ಲರಿಗೂ ತಿಳಿದ ವಿಷಯ. ಈಚೆಗೆ ಎಸ್. ಶಿವಣ್ಣ ಅವರು ವಿರೂಪಾಕ್ಷಾಷ್ಟಕ, ಹಂಪೆಯರಾಯನ ಶತಕ ಹೆಸರಿನ ಕೃತಿಗಳೂ ಹರಿಹರನವೆಂದು ನಿರ್ಧರಿಸಿ ಪ್ರಕಟಿಸಿದ್ದಾರೆ. ಆದರೆ ಹರಿಹರ ರಚಿಸಿದ ರಗಳೆಗಳ ಸಂಖ್ಯೆ ಎಷ್ಟು? ಎಂಬುದು ಇನ್ನೂ ಬಗೆಹರಿಯದ ಪ್ರಶ್ನೆಯಾಗಿ ಉಳಿದಿದೆ. ಈಚೆಗೆ ಡಾ. ಎಂ. ಎಂ. ಕಲಬುರ್ಗಿ ಅವರು (೧೯೯೯) 'ಹರಿಹರನ ರಗಳೆಗಳು' ಎಂಬ ಸಮಗ್ರ ಸಂಪುಟವನ್ನು ಹೊರತಂದಿದ್ದು, ಅದರಲ್ಲಿ ೧೦೮ ರಗಳೆಗಳನ್ನು ಸಂಗ್ರಹಿಸಿದ್ದಾರೆ. ಅವುಗಳಲ್ಲಿ ತಮಿಳುನಾಡಿನ ಪುರಾತನರ ರಗಳೆಗಳು ೬೦, ಕನ್ನಡ ನಾಡಿನ ಶರಣರ ರಗಳೆಗಳು ೨೨ ಮತ್ತು ಸಂಕೀರ್ಣ ರಗಳೆಗಳು ೨೬ ಸಮಾವೇಶಗೊಂಡಿವೆ. ಸದ್ಯಕ್ಕೆ ಇಷ್ಟನ್ನು ಮಾತ್ರ ಹರಿಹರ ರಚಿತ ರಗಳೆಗಳು ಎಂದು ಸ್ವೀಕರಿಸಿ ಮುಂದೆ ಹೋಗಬಹುದು.

**ರಕ್ಷಾಶತಕ–ಪಂಪಾಶತಕ :**

ಹರಿಹರನ ಆತ್ಮಕಥೆ ಮತ್ತು ವಿರೂಪಾಕ್ಷನ ಮೇಲಿನ ಆತನ ಉತ್ಕಟ ಭಕ್ತಿಯನ್ನು ತಿಳಿಸುವ ಮಹತ್ವದ ಕೃತಿಗಳೆಂದರೆ ರಕ್ಷಾಶತಕ ಮತ್ತು ಪಂಪಾಶತಕ. ಶತಕ ಸಾಹಿತ್ಯ ಕ್ಷೇತ್ರದಲ್ಲಿ ಅಷ್ಟೇ ಅಲ್ಲ, ಒಟ್ಟಾರೆ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಇವುಗಳಿಗೆ ಒಂದು ವಿಶಿಷ್ಟ ಅಗ್ರಮಾನ್ಯ ಸ್ಥಾನ ಮೀಸಲಾಗಿದೆ. ಮಾನವ ಬದುಕಿನ ಅತಿ ಮುಖ್ಯ ಮೌಲ್ಯಗಳನ್ನು ಸುಲಭ–ಸುಂದರವಾಗಿ ನಿರೂಪಿಸುವುದರಿಂದ ಇವು ಜನಮಾನಸದಲ್ಲಿ ಅಚ್ಚಳಿಯದ ಮುದ್ರೆಯನ್ನು ಒತ್ತಿ, ತುಂಬ ಜನಪ್ರಿಯ ರಚನೆಗಳಾಗಿ ಪ್ರಚಾರಪಡೆದಿವೆ.

'ರಕ್ಷಾಶತಕ'ದಲ್ಲಿ ೧೦೧ ಅಕ್ಷರ ಸಮವೃತ್ತಗಳಿವೆ. ಎಲ್ಲವೂ ಖ್ಯಾತ ಕರ್ನಾಟಕಗಳು. ಅವುಗಳಲ್ಲಿ ೧೭ ಸ್ರಗ್ಧರಾ ಮತ್ತು ೮೪ ಮಹಾಸ್ರಗ್ಧರಾ ವೃತ್ತಗಳು ಸಮಾವೇಶಗೊಂಡಿವೆ. ಪ್ರತಿವೃತ್ತ 'ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ' ಎಂದು ಮುಕ್ತಾಯಗೊಳ್ಳುತ್ತವೆ. ಮೊದಲ ವೃತ್ತದಲ್ಲಿ ವಿರೂಪಾಕ್ಷಸ್ತುತಿ ಇದೆ. ೧೦೦ನೆಯ ವೃತ್ತದಲ್ಲಿ ಕೃತಿ ಪಠಣದ ಫಲಶ್ರುತಿಯನ್ನು ಹೇಳಲಾಗಿದೆ. ಎರಡರಿಂದ ೯೯ರ ವರೆಗಿನ ವೃತ್ತಗಳಲ್ಲಿ ಆತ್ಮನ ಮಹಾಯಾತ್ರೆಯ ಕಥೆಯನ್ನು ನಿರೂಪಿಸಲಾಗಿದೆ.

ಆತ್ಮ ಇಲ್ಲಿ ಮುಖ್ಯವಾಗಿ ನಾಲ್ಕು ಪ್ರಶ್ನೆಗಳನ್ನು ಹಾಕಿಕೊಂಡು, ಅವುಗಳಿಗೆ ಉತ್ತರವನ್ನು ಕಂಡುಕೊಳ್ಳುತ್ತಾನೆ: ತನ್ನ ನಿಜಸ್ವರೂಪವನ್ನು ಅರಿತುಕೊಂಡು ಪರಮಾತ್ಮನಾಗಿ ಪರಿವರ್ತನೆ ಹೊಂದುತ್ತಾನೆ.

೧. ಹಿಂದೆ ನಾನು ಏನಾಗಿದ್ದೆ?

೨. ಮನುಜ ಜನ್ಮ ನನಗೆ ಏಕಾಯಿತು?

೩. ಸಂಸಾರ ದೋಷ, ಅರಿಷಡ್ವರ್ಗಗಳು ನನಗೆ ಎಲ್ಲಿಂದ ಬಂದವು?

೪. ಮುಂದೆ ನಾನು ಏನಾಗುತ್ತೇನೆ?

ಈ ಒಂದೊಂದೇ ಪ್ರಶ್ನೆಗಳಿಗೆ ಹರಿಹರ ಈ ಕೃತಿಯಲ್ಲಿ ಉತ್ತರಿಸುತ್ತ, ಆತ್ಮನನ್ನು ಅಜ್ಞಾನ ಕತ್ತಲೆಯಿಂದ ಅರಿವಿನ ಬೆಳಕಿನತ್ತ ಕರೆದುಕೊಂಡು ಸಾಗುತ್ತಾನೆ.

ಆತ್ಮ, ಹಿಂದೆ ಕಲ್ಲು–ಮಣ್ಣು, ಗಿಡ–ಗಂಟೆ, ಖಗ–ಮೃಗ ಮೊದಲಾದ ೮೪ ಲಕ್ಷ ಜೀವರಾಶಿಗಳಲ್ಲಿ ಹುಟ್ಟಿ–ಸತ್ತು, ಹೇಗೋ ಮಾನವ ಜನ್ಮಕ್ಕೆ ಬರುತ್ತದೆ. ಹುಟ್ಟುವ ಪೂರ್ವದಲ್ಲಿಯೇ ತಾಯಿಯಗರ್ಭದಲ್ಲಿ ಮಾಂಸ ರಕ್ತ, ಮಲಮೂತ್ರ, ಜಠರಾಗ್ನಿಯಲ್ಲಿ ಸಿಕ್ಕು ಹೊರಳುತ್ತ, ಹುಟ್ಟುವಾಗಲೇ ಸಾವಿನ ನೋವನ್ನು ಅನುಭವಿಸಿ ಹೊರಬರುತ್ತದೆ. ಬಾಲ್ಯದಲ್ಲಿ ಅರಿವಿಲ್ಲದೆ ಎಲ್ಲೆಲ್ಲೋ ಹೊರಳುತ್ತದೆ. ಏನೇನನ್ನೋ ತಿನ್ನುತ್ತದೆ. ಯೌವ್ವನದಲ್ಲಿ ಮನೋವಿಕಾರತೆಯಿಂದ, ಸ್ತ್ರೀಲೋಲುಪನಾಗಿ, ಇಂದ್ರಿಯ ಚಾಪಲ್ಯಕ್ಕೆ ಒಳಗಾಗಿ

ಮಂಗ–ನಾಯಿ–ಹಂದಿಯಂತೆ ವರ್ತಿಸುತ್ತದೆ. ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆಂಬ ಅರಿಷಡ್ವರ್ಗಗಳು ಮುತ್ತಿಗೆ ಹಾಕುತ್ತವೆ. ಅವುಗಳ ಉಪಟಳಕ್ಕೆ ಸಿಕ್ಕಿ ಬಳಲುತ್ತದೆ. ಮನ, ಬುದ್ಧಿ, ಅಹಂಕಾರ, ಚಿತ್ತ ವಿಕಾರತೆಗಳಿಂದ ತೊಳಲುತ್ತದೆ. ವ್ಯವಸಾಯ, ವ್ಯವಹಾರ ಇತ್ಯಾದಿ ನಾನಾ ವೃತ್ತಿಗಳನ್ನು ಆಶ್ರಯಿಸಿ ದುಡಿದು, ಅನ್ಯರ ಸೇವೆ ಮಾಡಿ, ದೈನ್ಯದ ಬದುಕು ಸಾಗಿಸಿ ದಣಿಯುತ್ತದೆ. ಸಂಸಾರದ ಬಂಧನಕ್ಕೊಳಗಾಗಿ ಮಡದಿ–ಮಕ್ಕಳನ್ನು ಸಲಹುವಲ್ಲಿ ಹೋರಾಟ ನಡೆಸುತ್ತದೆ. ನಾನಾ ರೋಗಗಳಿಗೆ ತುತ್ತಾಗಿ ನರಳುತ್ತದೆ. ಇವೆಲ್ಲವುಗಳಿಂದ ಬಿಡುಗಡೆಹೊಂದಲು ಕೊನೆಗೆ ದೇವರ ಮೊರೆಹೋಗುತ್ತದೆ.

ಶಿವನನ್ನು ಅನನ್ಯ ಭಕ್ತಿಯಿಂದ ಅರ್ಚಿಸಿ, ಪೂಜಿಸಿ, ಧ್ಯಾನಿಸಿ, ಪ್ರಾರ್ಥಿಸಿ, 'ನಿಮಗೆನ್ನಂ ಮಾರುಗೊಟ್ಟೆಂ ಪುರಹರ, ನಿಮಗೆನ್ನಂ ಸದಾ ತೊಳ್ತುಗೊಟ್ಟೆಂ' ಎಂದು ಸರ್ವಾರ್ಪಣಭಾವವನ್ನು ತೋರುತ್ತದೆ. 'ಬಿಡೆನೀಶಾ ನಿಮ್ಮ ಪಾದಾಬ್ಜಮನೆಲೆಲೆ ಬಿಡೆಂ ಸೀಳ್ದೊಡಂ ಪೋಳ್ದೊಡಂ ಪೊಯ್ದೊಡಂ' ಎಂದು ವೀರನಿಷ್ಠೆಯನ್ನು ಪ್ರಕಟಿಸುತ್ತದೆ. 'ಕರ್ತಾರಂ ನೀನೆ, ಭರ್ತಾರಂ ನೀನೆ, ಹರ್ತಾರಂ ನೀನೆ, ಕೂರ್ತಿಂತೋರಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ' ಎಂದು ವೀರಭಕ್ತಿಯನ್ನು ಮೆರೆಯುತ್ತದೆ. ಈಶಭಕ್ತಿಯ ವಿಭಿನ್ನ ಪರಿಗಳು ಪಂಪಾಶತಕದಲ್ಲಿ ಮುಂದುವರಿಯುತ್ತವೆ; ಕೊನೆಗೆ ಶಿವಸಾಕ್ಷಾತ್ಕಾರ–ಶಿವಸಾಯುಜ್ಯದ ಸುಖ ಪ್ರಾಪ್ತವಾಗುತ್ತದೆ.

ಹೀಗೆ ರಕ್ಷಾಶತಕದಲ್ಲಿ–ಅಪರಿಪೂರ್ಣನೂ ಅಪಕ್ವನೂ ಆದ ಆತ್ಮ ನಾನಾಜನ್ಮಗಳಲ್ಲಿ ಹುಟ್ಟಿ–ಸತ್ತು ಮಾನವಜನ್ಮಕ್ಕೆ ಬಂದು, ಅಜ್ಞಾನವಶದಿಂದ ಸಂಸಾರ ತಾಪತ್ರಯ–ಮನೋವಿಕಾರತೆಯಲ್ಲಿ ಸಿಕ್ಕು ನರಳಿ, ಕೊನೆಗೆ ಅರಿವಿನ ಕಣ್ಣು ತೆರೆದು ಪರಶಿವನಿಗೆ ಮೊರೆಹೋಗಿ, ತನ್ನ ಕೊರತೆಯನ್ನು ನೀಗಿಕೊಂಡು ಪರಿಪೂರ್ಣನೂ, ಪರಿಪಕ್ವನೂ ಆಗುವ ಹಂಬಲವನ್ನು ತೋರುವ ಬಗೆಯುನ್ನು ತುಂಬ ಪರಿಣಾಮಕಾರಿಯಾಗಿ ಬಣ್ಣಿಸಲಾಗಿದೆ. ಇದು ಒಂದು ರೀತಿಯಲ್ಲಿ ಆತ್ಮಶೋಧನೆ ಮತ್ತು ಆತ್ಮಪರಿಶೀಲನೆಯ ಅತ್ಯುತ್ತಮ ಮಾರ್ಗಸೂಚಿಯೆನಿಸಿದೆ. ಹಸನಾದ ಬದುಕಿಗೆ ದಾರಿದೀಪವಾಗಿದೆ. ಕವಿ ಇಲ್ಲಿ ತನ್ನ ಬದುಕನ್ನೇ ಲಕ್ಷ್ಯವಾಗಿರಿಸಿಕೊಂಡು ಇಡೀ ಮಾನವ ಬದುಕಿಗೇ ಅನ್ವಯಿಸುವಂತೆ ಹೇಳಿದ ವಿಧಾನ ವಿಶೇಷವೆನಿಸಿದೆ. ಕವಿಯ ಸ್ವಾನುಭವ ಮತ್ತು ಲೋಕಾನುಭವ ಎರಡೂ ಇಲ್ಲಿ ಸಮಭಾವದಿಂದ ಬೆರೆತಿವೆ. 'ಪಾರಮಾರ್ಥ' ಮತ್ತು 'ಸಮ್ಯಕ್ ಪರತರ'ವನ್ನು ತಿಳಿಸುವುದೇ ಈ ಕೃತಿಯ ಪರಮ ಗುರಿಯಾಗಿದೆ.

'ಪಂಪಾಶತಕ'ದಲ್ಲಿ ೧೦೩ ವೃತ್ತಗಳಿವೆ. ಅವು ಎಲ್ಲವೂ ಖ್ಯಾತಕರ್ನಾಟಕ ವೃತ್ತಗಳೇ ಆಗಿವೆ. ಅವುಗಳಲ್ಲಿ ೩೨ ಚಂಪಕಮಾಲೆ, ೧೩ ಉತ್ಪಲಮಾಲೆ, ೩೨ ಮತ್ತೇಭವಿಕ್ರೀಡಿತ, ೮ ಶಾರ್ದೂಲವಿಕ್ರೀಡಿತ, ೨ ಸ್ರಗ್ಧರಾ ಮತ್ತು ೧೬ ಮಹಾಸ್ರಗ್ಧರಾ ವೃತ್ತಗಳು ಸಮಾವೇಶಗೊಂಡಿವೆ. ಈ ವೃತ್ತಗಳು ಹೆಚ್ಚಾಗಿ 'ಹಂಪೆಯಾಳ್ದನೆ' ಮತ್ತು 'ವಿರೂಪಾಕ್ಷಲಿಂಗ' ಎಂದು, ಕ್ವಚಿತ್ತಾಗಿ 'ಪಂಪಾಶ್ರೀಪುರಾಧೀಶ್ವರ', 'ವಿರೂಪಾಕ್ಷ', 'ಹಂಪೆಯಲಿಂಗ', 'ಹಂಪೆಯ ದೇವ' 'ಹಂಪೆಯದೇವರಾಯ' ಎಂದು ಮುಕ್ತಾಯಗೊಳ್ಳುತ್ತವೆ.

ಮೊದಲಪದ್ಯ ವಿರೂಪಾಕ್ಷನ ಸ್ತುತಿಯಿಂದ ಆರಂಭವಾಗುತ್ತದೆ. ಅದು ಮುಂದೆ ಎಲ್ಲ ಪದ್ಯಗಳಲ್ಲಿಯೂ ವ್ಯಾಪಿಸುತ್ತದೆ. ಸಾಕಾರ ಶಿವನನ್ನು ವಿರೂಪಾಕ್ಷನಾಮದಿಂದ ಬಗೆಬಗೆಯಾಗಿ ಬಣ್ಣಿಸಲಾಗಿದೆ. ವಿರೂಪಾಕ್ಷನೊಬ್ಬನೆದೇವ; ಆತನ ಪೂಜೆ–ಸ್ತುತಿ–ಧ್ಯಾನ ಒಂದೇ ಕಾರ್ಯ. ಆತನೊಬ್ಬನೆ ಎಲ್ಲರ ಸಂಸಾರಬಂಧನ ಬಿಡಿಸಿ ನಿಜಸುಖವನ್ನು ನೀಡುವವನು. ಅದಕ್ಕಾಗಿ ಆತನಿಗಾಗಿ ಕವಿ ತನ್ನ ನಾಲಗೆಯನ್ನು ಮಾರಿಕೊಂಡಿದ್ದಾನೆ, ಮೀಸಲಾಗಿಟ್ಟಿದ್ದಾನೆ. ಇಲ್ಲಿ ಆತನ ಉತ್ಕಟ ಭಕ್ತಿ–ನಿಷ್ಠೆಗಳು ಸುಪ್ರಕಟವಾಗಿವೆ. ಏತನ್ಮಧ್ಯೆ–ಪೂಜೆಯ ವಿಧಾನ, ಸದ್ಭಕ್ತನ ಲಕ್ಷಣ, ಶಿವನ ಮಹಿಮೆ, ಅವನ ಭಕ್ತಿಯಿಂದ ಸಾಯುಜ್ಯ ಪದವಿ ಪಡೆದ ಪುರಾತನ ಭಕ್ತರ ಸ್ಮರಣೆ, ಮಾನವಜನ್ಮದ ಹಿರಿಮೆ, ಪಾಪ–ಪುಣ್ಯಗಳ ಪರಿಕಲ್ಪನೆ, ಶಿವಸೇವೆಯ ಮಹತಿ–ಮೊದಲಾದ ವಿಷಯಗಳ ವಿವರಣೆ ನೀಡುತ್ತಾನೆ. ಒಟ್ಟಿನಲ್ಲಿ ಇದೊಂದು 'ಶಿವಮಹಿಮಾಶತಕ'ವಾಗಿ ಮನಸ್ಸನ್ನು ಸೆರೆಹಿಡಿಯುತ್ತದೆ.

ಇಲ್ಲಿ ಮುಖ್ಯವಾಗಿ–

೧. ಕೆಡುವ ಒಡಲಿನ ಸಾರ್ಥಕತೆಯಾಗುವುದು ಏತರಿಂದ?

೨. ಭಗವಂತನ ದರ್ಶನವಾಗುವುದು ಹೇಗೆ?

೩. ಭೂಲೋಕದಲ್ಲಿ ಭಗವಂತನನ್ನು ಸಾಕ್ಷಾತ್ಕರಿಸಿಕೊಂಡ ಮಹಾನುಭಾವರ ಬದುಕು ಎಂತಹದು?

ಎಂಬ ಮೂರು ಪ್ರಶ್ನೆಗಳನ್ನು ಹಾಕಿಕೊಂಡು ಅದಕ್ಕೆ ಉತ್ತರವನ್ನು ನೀಡುತ್ತ ಸಾಗಲಾಗಿದೆ.

ಕೊನೆಯ ವೃತ್ತದಲ್ಲಿ ಶತಕದ ಆಶಯವನ್ನು ತಿಳಿಸುತ್ತ–"ಪುಣ್ಯಮಾರ್ಗಮಿದು, ಸಾತ್ವಿಕ ಲಕ್ಷಣಮಿದು, ಆದ್ಯರನ್ವಯಮಿದು, ಭಕ್ತಿರಸಪೂರವಿದು, ಉತ್ತಮ ಶೀಲಭಕ್ತರಾಶ್ರಯಮಿದು, ಇದರಿಂದ ಸಕಲ ಇಷ್ಟಾರ್ಥಫಲಗಳು ಪ್ರಾಪ್ತವಾಗುತ್ತವೆ" ಎಂದು ಹೇಳುತ್ತಾನೆ.

ಎರಡೂ ಶತಕಗಳು ಒಂದಕ್ಕೊಂದು ಪೂರಕವಾಗಿವೆ; ಒಂದರ ಮುಂದುವರಿಕೆ ಇನ್ನೊಂದಾಗಿ ತೋರುತ್ತದೆ. ರಕ್ಷಾಶತಕದಲ್ಲಿ ಸಂಸಾರದ ಅಸಾರತೆ ತಿಳಿಸಿ, ಜೀವಿಯ ಮನಸ್ಸನ್ನು ವೈರಾಗ್ಯದತ್ತ, ಶಿವನತ್ತ ಒಯ್ಯಲು ಪ್ರಯತ್ನಿಸಿದರೆ, ಪಂಪಾಶತಕದಲ್ಲಿ ಶಿವಕೃಪೆಗೊಳಗಾದ ಜೀವಿಯು ಮಾನವಜನ್ಮದ ಮಹತಿಯನ್ನು ಅರಿತು, ಅದನ್ನು ಸಾರ್ಥಕಪಡಿಸಿಕೊಳ್ಳಲು ಅನುಸರಿಸಬೇಕಾದ ಮಾರ್ಗೋಪಾಯಗಳನ್ನು ತಿಳಿಸಿಕೊಡಲಾಗಿದೆ. ಒಂದರಲ್ಲಿ ಜೀವಿಯ ತೊಳಲಾಟದ ಚಿತ್ರವಿದ್ದರೆ, ಮತ್ತೊಂದರಲ್ಲಿ ಅವನ ಶಿವಸುಖಸಂಭ್ರಮದ ಬಿಂಬವಿದೆ."ಅನೇಕ ಉಪಾಧಿಗಳಿಂದ ಕೂಡಿ, ಭಯಾನಕವಾಗಿರುವ ಈ ಘೋರಸಂಸಾರವೆಂಬ ಅರಣ್ಯವನ್ನು ಸುರಕ್ಷಿತವಾಗಿ ದಾಟಿ, ತನ್ನ ಗಮ್ಯಸ್ಥಾನವನ್ನು ಸೇರಲು ಹೊರಟಿರುವ ಜೀವಿ ಎಂಬ ಪಥಿಕನಿಗೆ ಶಿವನ ಕಾರುಣ್ಯವೆಂಬ ರಕ್ಷೆಯು ಅವಶ್ಯವಾಗಿದೆ" ಎಂಬುದೇ ರಕ್ಷಾಶತಕದ ಉದ್ದೇಶವಾದರೆ, "ಹಂಪೆಯ ವಿರೂಪಾಕ್ಷನೇ ತನ್ನ ಜೀವಿತದ ಉಸಿರು, ಸೇವೆಯವಸ್ತು, ಮುಟ್ಟುವ ತಾಣ" ಎಂಬುದೇ ಪಂಪಾಶತಕದ ಉದ್ದೇಶವಾಗಿದೆ.

'ಭಕ್ತಿಯೊಂದೇ ದುಃಖನಿವಾರಕ'ವೆಂದು ಅರಿತ ಭಕ್ತಕವಿ ಹರಿಹರ ಎರಡೂ ಶತಕಗಳಲ್ಲಿ ವಿರೂಪಾಕ್ಷನನ್ನು ಅನನ್ಯ ಭಕ್ತಿಯಿಂದ ಸ್ತುತಿಸುತ್ತಾನೆ. ಇತರರೂ ಸ್ತುತಿಸಿ ಭವಬಂಧನದಿಂದ ಬಿಡುಗಡೆಹೊಂದಿ ಶಿವಸುಖವನ್ನು ಪಡೆಯಬೇಕೆಂದು ಪರ್ಯಾಯವಾಗಿ ಸೂಚಿಸುತ್ತಾನೆ.

ಎರಡೂ ಶತಕಗಳು ವಿಷಯನಿರೂಪಣೆ, ಜೀವನದರ್ಶನ ಮತ್ತು ಕಾವ್ಯ ಸತ್ವಗಳ ದೃಷ್ಟಿಯಿಂದ ಅತ್ಯಂತ ಪ್ರಭಾವಶಾಲಿಯಾಗಿವೆ; ತುಂಬ ಪರಿಣಾಮಕಾರಿಯೆನಿಸಿವೆ; ಹೀಗಾಗಿ ಜನಪ್ರಿಯತೆಯನ್ನೂ ಗಳಿಸಿವೆ. 'ಜನ ಬದುಕಬೇಕೆಂದು' ಕಾವ್ಯ ರಚಿಸಹೊರಟ ಹರಿಹರ ತನ್ನ ಎಲ್ಲ ಕೃತಿಗಳನ್ನು ಸಹಜ–ಸರಸ–ಸರಳ ಶೈಲಿಯಲ್ಲಿ ರಚಿಸಲು ಮುಂದಾಗಿದ್ದಾನೆ. ಆತನ 'ಗಿರಿಜಾಕಲ್ಯಾಣ' ಚಂಪೂರೂಪದಲ್ಲಿದ್ದರೂ ಪಂಪಾದಿಗಳ ಸಂಸ್ಕೃತ ಭೂಯಿಷ್ಠತೆ ಮತ್ತು ಪಾಂಡಿತ್ಯ ಪ್ರದರ್ಶನಗಳಿಗೆ ಅಲ್ಲಿ ಎಡೆಯಿಲ್ಲ. ರಗಳೆಗಳಂತೂ ನಿರರ್ಗಳ–ಸುಲಭ–ಸುಭಗ ಶೈಲಿಯಲ್ಲಿ ಪಂಡಿತ–ಪಾಮರರೀರ್ವರಿಗೂ ವೇದ್ಯವಾಗುವಂತಿವೆ. ಹಾಗೆಯೇ ಶತಕಗಳನ್ನು ಆತ ಸಂಸ್ಕೃತ ಅಕ್ಷರವೃತ್ತಗಳಲ್ಲಿ ರಚಿಸಿದ್ದರೂ ಅವುಗಳಲ್ಲಿ ಕಾಠಿಣ್ಯ ಕ್ಲಿಷ್ಟತೆಗಳಿಲ್ಲ. ಬದಲಾಗಿ ಸರಳತೆ, ಸಂವಹನಶೀಲತೆ, ದೇಶೀಯತೆ ಸಾಮರಸ್ಯಗೊಂಡು ವಿಶಿಷ್ಟ ಪರಿಣಾಮರಮ್ಯತೆ ಮೈವೆತ್ತಿದೆ. ಆತ ಬಳಸುವ ಭಾಷೆ ಜನರ ಬಾಯಿಂದೆತ್ತಿ ತಂದ ಆಡುನುಡಿ; ಅದಕ್ಕೆ ಆತ ಭಕ್ತಿಭಾವದ ಸಂಸ್ಕಾರವಿತ್ತು ಪ್ರಾಸಾದಿಕಗೊಳಿಸುತ್ತಾನೆ. ಭಕ್ತಿಯ ಆವೇಗ–ಆವೇಶಕ್ಕನುಗುಣವಾಗಿ ಅದು ಭಾವರಮ್ಯತೆಯನ್ನು ಪಡೆಯುತ್ತದೆ.

"ನಿಮಗೆನ್ನಂ ಮಾರುಗೊಟ್ಟೆಂ ಪುರಹರ.........................." ರಕ್ಷಾಶತಕ–೭೮

" ಎನಗಾರ್ ದೈವಂ ವಿರೂಪಾಕ್ಷನೆ.................................." ಅದೇ–೮೧

"ಎನ್ನಾನಂದಾಬ್ಧಿಯೆ ಎನ್ನನುಪಮ ಸುಧೆಯೆ..............." ಅದೇ–೯೬

"ಬಿಡೆನೀಶಾ ನಿಮ್ಮ ಪಾದಾಬ್ಜಮನೆಲೆಲೆ ಬಿಡೆಂ ಸೀಳ್ದೊಡಂ ಪೋಳ್ದೊಡಂ......."

ಅದೇ–೯೮

"ಕರ್ತಾರಂ ನೀನೇ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ......" ಅದೇ–೯೯

"ಕರೆವುದೆಂದು ಕಾಲ್ವಿಡಿಸಿಕೊಳ್ವುದೆಂದು ದಯಾಕಟಾಕ್ಷದಿಂ ಪೊರೆವುದದೆಂದು...."

ಪಂಪಾಶತಕ–೫

"ನಡೆತಂದೆನ್ನಯ ಕಣ್ಗಳಲಿರು ವಿರೂಪಾಕ್ಷಾ ವಿರೂಪಾಕ್ಷ ನೀಂ......." ಅದೇ–೭

"ನೋಡದ ಕಣ್ಗಳೇತಕೆ, ಸಲೆ ಕೇಳದ ಕರ್ಣಮದೇಕೆ, ಭಕ್ತಿಯಿಂ ಪಾಡದ ಬಾಯದೇಕೆ...."

ಅದೇ–೮

ಎಂಬಂಥ ಪದ್ಯಗಳಲ್ಲಿ ಭಕ್ತ್ಯೋನ್ಮಾದದ ಕಾವ್ಯಗಂಗೆ ರಭಸವಾಗಿ–ಓತಪ್ರೋತವಾಗಿ ಹರಿದಿದೆ. ಅದಕ್ಕೆ ಅನುಗುಣವಾದ ಭಾಷೆ–ಅನುರೂಪವಾಗಿ ಬಳಕೆಗೊಂಡಿದೆ. ಭಾವ ಮತ್ತು ಭಾಷೆ ಸಮರಸಗೊಂಡು ಪದ್ಯಕ್ಕೆ ಭಾವಗೀತೆಯ ಸತ್ವ ಪ್ರಾಪ್ತವಾಗಿದೆ.

ಪೊಗಳೆಂ ಮಿಕ್ಕಿನ ಚಕ್ರಪಾಣಿ ಸರಸಿಜೋದ್ಭೂತ ಸಂಕ್ರಂದನಾ
ದಿಗಳಂ ತಾನೆನೆ ಮರ್ತ್ಯ ಕೀಟಕರ ಮಾತಂತಿರ್ಕೆ ಮತ್ತಾವನಂ
ಬಗೆದಾರೆಂ ಬಿಡದಾ ಹರಂಗೆ ಶಶಿಭೂಷಂಗೀಶ್ವರಂಗೆಯ್ದೆ ನಾ
ಲಗೆಯಂ ಮಾಜಿದೆನೊಲ್ದು ಹಂಪೆಯ ವಿರೂಪಾಕ್ಷಂಗದೇನೆಂದಪೆಂ– ಪಂ.ಶ.೮೧
ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆಯಕ್ಕಟಾ
ತನತನಗಿಂದ್ರ ಚಂದ್ರ ರವಿ ಕರ್ಣ ದಧೀಚಿ ಬಲೀಂದ್ರನೆಂದು ಮೇಣ್
ಅನವರತಂ ಪೊಗಳ್ದು ಕೆಡಬೇಡೆಲೆ ಮಾನವ ನೀನಹರ್ನಿಶಂ
ನೆನೆ ಪೊಗಳರ್ಚಿಸೆಮ್ಮ ಕಡುಸೊಂಪಿನ ಪೆಂಪಿನ ಹಂಪೆಯಾಳ್ದನಂ – ಪಂ.ಶ.೮೨

ಎಂಬ ಪದ್ಯಗಳಲ್ಲಿ ವ್ಯಕ್ತವಾದ ಅಭಿಪ್ರಾಯಗಳು ಹರಿಹರನ ಕಾವ್ಯದ ನೂತನ ಧೋರಣೆಯನ್ನು ಸಾರಿದವು. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಹೊಸದೊಂದು ಕಾವ್ಯಮಾರ್ಗಕ್ಕೆ ನಾಂದಿ ಹಾಡಿದವು. ಮುಂದೆ ಬಂದ ಲಿಂಗಾಯತ ಕವಿಗಳಿಗೆಲ್ಲ ಮಾರ್ಗಸೂಚಿಯಾಗಿ, ಅವರ ಸಾಹಿತ್ಯಕ್ಕೆ ಹೊಸ ದಿಕ್ಕು ದಿಶೆಯನ್ನು ತೋರಿಸಿಕೊಟ್ಟವು.

"ಮನುಜ ಜನ್ಮದೊಳುದ್ಭವಿಸಿರ್ದುದು ಅಪೂರ್ವಂ"

"ಜನಿಯಿಸುತಿರ್ಪ ಕೋಟಿಜನನಂಗಳೊಳ್ ಉತ್ತಮೋತ್ತಮಂ ಮನುಜಭವಂ
ಇದಂ ಪಡೆದುಂ ಮರುಳಾಗಿ ಸತ್ತೊಡೆ, ಈ ಜನನವಿದೆಂದು ಬರ್ಪುದು?

ವೃಥಾ ಕೆಡದಿರ್, ನಿರಂತರಂ ಪೂಜಿಸು ಮಾನವ ಹಂಪೆಯಾಳ್ದನಂ"

ಎಂಬಲ್ಲಿ ಮಾನವಜನ್ಮ ಅಪೂರ್ವವಾದುದು, ಅದರ ಸಾರ್ಥಕತೆ ಇರುವುದು ನಿರಂತರ ಹಂಪೆಯಾಳ್ದನನ್ನು ಪೂಜಿಸುವುದರಲ್ಲಿ ಎಂದು ತಿಳಿಸುತ್ತಾನೆ.

"ಹೆಂಡತಿ ಬಾರಳು, ಅರ್ಥವದು ಬಾರದು, ಪುತ್ರರೆ ಬಾರರು

ಇಷ್ಟರುಂ ಸಖೀಜನಂ ಜನನಿಯುಂ ಪಿತನುಂ ಬಾರರು

ತಂಡದ ಪಾಪಪುಣ್ಯಮಿವೆ ಬರ್ಪುವು"

ಎಂಬಲ್ಲಿ ಜೀವನಾಂತ್ಯದಲ್ಲಿ ಬರುವ ವಸ್ತುಗಳು – ಹೆಂಡತಿಮಕ್ಕಳು, ಬಂಧುಬಳಗವಲ್ಲ, ಪಾಪ–ಪುಣ್ಯಗಳು ಮಾತ್ರ ಎಂದು ಹೇಳುತ್ತಾನೆ.

"ಘನಚೋದ್ಯಂ ನಿನ್ನ ಭಕ್ತಾವಳಿಯ ನಡೆವಳಿ–

ಇಲ್ಲಿ ಜಗಕ್ಕೆ ಪೂಜಿತರುಂ ಅಲ್ಲಿ ಪರಕ್ಕೆ ವಿಶೇಷ ಪೂಜ್ಯರು;

ಇಂತಿಲ್ಲಿಯುಂ ಅಲ್ಲಿಯುಂ ಮೆರೆವವರ್"

"ಪುರಾತನರ್ ಪರಿದುದೆ ಗಂಗೆ; ನಿಂದೊಡದು ತೀರ್ಥ;

ಒಡರ್ಚಿತೆ ಕಾರ್ಯ; ಎಂದುದೆ ಹರವರಿ; ಇರ್ದುದೆ ಸಭೆ; ನಿರೀಕ್ಷಣೆಗೆಯ್ದುದೇ ಲೋಕಪಾವನ"

ಅವರು–'ದುರ್ವಿಷಯಂಗಳನೊಂದಿ ಬಾಳ್ದವರಲ್ಲ"; "ಕರ್ಮದ ಕೈಯೊಳೆ ಸತ್ತು ಹೋದವರಲ್ಲ"

"ಕಾಲನ ಬಾಧೆಗೆ ಬಿದ್ದು ಮಡಿದವರಲ್ಲ", "ಕಾಮ ಕ್ರೋಧ ಮಾಯೆಯ ಬಾಯಿಗೆ ತುತ್ತಾದವರಲ್ಲ"

"ನೀತಿಯಂ ಬಿಸುಟು ನಡೆದವರಲ್ಲ" "ಮಹಾತ್ಯಾಗಿಗಳು, ಅನುಪಮಚರಿತರು, ಘನದೀರರು" "ಅವರ ನಡೆ ಉರಿನಡೆವಂತೆ, ಭಾನುನಡೆವಂತೆ, ಸಿಡಿಲ್ ನಡೆವಂತೆ ದೂಷಕರಿಗೆ"

ಇಂಥ ಮಹಾನುಭಾವರ ನಡೆ–ನುಡಿ ನಮಗೆ ಅದರ್ಶವಾಗಬೇಕು ಎಂದು ಅರುಹುತ್ತಾನೆ.

ಅವರು ಒಲಿಸಿಕೊಂಡ ಶಿವನು ಸಾಮಾನ್ಯನಲ್ಲ. ಅವನು " ಅನುಪಮ ದಾನಿ, ಅಪ್ರತಿಮದಾನಿ, ನಿರಂತರದಾನಿ, ಪೆಂಪಿನ ಘನದಾನಿ, ಕೌತುಕದ ದಾನಿ, ಮಹೋನ್ನತದಾನಿ" ಆತ. "ಮದನವಿರೋಧಿ, ದುರಿತಾಂತಕ, ನವನಿಧಿ, ಪುಣ್ಯನಿಧಿ, ಭಕ್ತರುತ್ಸವ ನಿಧಿ, ಭಾಗ್ಯನಿಧಿ, ಕೃಪಾನಿಧಿ, ಸಮಸ್ತಭಕ್ತ ಸಂಜೀವನ"–ಎಂದು ತಿಳಿಸುತ್ತಾನೆ.

"ಶರಣಂ ಸಂಸಾರಿಯೇ? ಮಾಣ್ ಪುಸಿ ಪುಸಿ!

ಶರಣಂ ಕಾಮಿಯೆ? ಪೇಳಲೆಂತುಟು?

ಶರಣಂ ತಾಂ ಕ್ರೋಧಿಯೆ? ಸಲ್ಲದು ತೆಗೆ.

ಶರಣಂ ಮರ್ತ್ಯನೆ? ಅಲ್ಲವೈ ಕೇಳ್!

ಶರಣಂ ನಿರ್ಮಾಯನೆಂತುಂ; ಶರಣನತುಳ ನಿಷ್ಕಾಮಿಯೆಲ್ಲಂದದಿಂದಂ;

ಶರಣಂ ಶಾಂತಂ, ಸುಮರ್ತ್ಯಂ, ಶರಣನಮಮ ತಾನೆ ವಿರೂಪಾಕ್ಷಲಿಂಗಂ"
ಎಂದು ಶರಣನ ಲಕ್ಷಣಗಳನ್ನು ವರ್ಣಿಸುತ್ತಾನೆ.

ಇವರು ತೋರಿದ ಮತ್ತು ಮೆರೆದ ಭಕ್ತಿ ಅತ್ಯಂತ ಶ್ರೇಷ್ಠವಾದ ಜೀವನ ಮೌಲ್ಯ ಎಂದು ಪ್ರತಿಪಾದಿಸುತ್ತಾನೆ. ಇದು ಬಸವಾದಿ ಶರಣರು ರೂಪಿಸದ ಮೌಲ್ಯ. ಹರಿಹರನಿಗೂ ಇದು ಅನುಕರಣೀಯ ಮತ್ತು ಆದರ್ಶ. ಹೀಗಾಗಿ ಅವನು ಭಕ್ತಿ ಮೌಲ್ಯವನ್ನು ತನ್ನೆಲ್ಲ ಕೃತಿಗಳ ಜೀವದ್ರವ್ಯವಾಗಿ ಬಳಸಿಕೊಂಡಿದ್ದಾನೆ. ಈ ಶತಕಗಳು ಅದಕ್ಕೆ ಜೀವಂತ ಸಾಕ್ಷಿ ಎನಿಸಿವೆ.

## ಪುಲಿಗೆರೆಯ ಸೋಮ

"ಸೋಮೇಶ್ವರ ಶತಕ' ದ ಕರ್ತೃ ಸೋಮ. ಪುಲಿಗೆರೆಯ ಸೋಮೇಶ ಈತನ ಇಷ್ಟದೈವ. ಕ್ರಿ.ಶ. ೧೩೦೦ ಈತನ ಕಾಲ. ಪುಲಿಗೆರೆ ಈತನ ಸ್ಥಳ. ಈ ಸಂಗತಿಗಳು ಈ ಶತಕದ ೧,೩, ೧೦೧ ಮತ್ತು ೧೦೭ ನೆಯ ಪದ್ಯಗಳಿಂದಲೇ ತಿಳಿದುಬರುತ್ತವೆ:

"....ನೀತಿಯೇ ಸಾಧನಂ ಸಕಲಲೋಕಕ್ಕೆಲ್ಲ ಬೇಕೆಂದು ಪೇಳಿದ ಸೋಮಂ....." ಪ.೩

".........ದೇವದೇವಂ ಪುಲಿಗೆಱೆನಗರೀ ಶಾಸನಾಂಕ ಮೃಗಾಂಕಂ ಸೋಮೇಶಂ

ಸರ್ಪಭೂಷಂ ಸಲಹುಗೆ ಜಗಮಂ ಸರ್ವದಾ ಸುಪ್ರಸನ್ನಂ" –ಪ.೧.

"........ಪುಲಿಗೆಱೆ ನಗರೀ ಶಾಸನಾಂಕಾ ಮಹೇಶಾ" –ಪ.೧೦೭.

"ಸ್ವಾಮೀ ನನ್ನಿಂದ ನೀನಿಂತೊರೆಯಿಸಿದೆ ಕೃಪಾದೃಷ್ಟಿಯಂ ಬೀಱೆ ಲೋಕ

ಪ್ರೇಮಂ ತಾಳ್ದಿಂತು ನೀತಿ ಪ್ರಕಟನೆ ಪಡೆ ನಾಲ್ಸಾಸಿರಂ ನಾಲ್ಕುನೂಱುಂ

ಈ ಮಾಯಾ ಪೂರ್ಣಕಲ್ಯಬ್ದದೆ ಗತಿಸಿ ವಿಕಾರ್ಯಬ್ದದಲ್ಲೀಶ್ವರಾ ನಿ

ನ್ನಾ ಮಹಾತ್ಮ್ಯಂಘ್ರಿಗಿತ್ತೆಂ ಪುಲಿಗೆಱೆ ನಗರೀ ಶಾಸನಾಂಕಾ ಮಹೇಶಾ"–ಪ.೧೦೧
ಹೀಗಿದ್ದೂ ಈ ಶತಕದ ಕರ್ತೃವಿನ ಬಗೆಗೆ ಭಿನ್ನಾಭಿಪ್ರಾಯಗಳು ಹುಟ್ಟಿಕೊಂಡಿದ್ದು ಅಚ್ಚರಿಯ ಸಂಗತಿ. ಕವಿಚರಿತೆಕಾರರು ಈ ಶತಕಕ್ಕೆ ಇರುವ 'ಸೋಮಾರಾಧ್ಯಶತಕ' ಎಂಬ ಇನ್ನೊಂದು ಹೆಸರನ್ನು ಗಮನಿಸಿ ಇದರ ಕರ್ತೃ ಪಾಲ್ಕುರಿಕೆ ಸೋಮಾರಾಧ್ಯ; ಈತನ ಕಾಲ ಕ್ರಿ.ಶ.೧೨೦೦ ಎಂದು ಊಹಿಸಿದ್ದರು.

ಎಂ.ಜಿ.ನಂಜುಂಡಾರಾಧ್ಯರು ತಮಗೆ ದೊರೆತ ಸೋಮೇಶ್ವರ ಶತಕದ ಒಂದು

ಹಸ್ತಪ್ರತಿಯ ಕೊನೆಯಲ್ಲಿ "ವರಸಮ್ಯಕ್ತ್ವ ಸುಧರ್ಮ ಜೈನಮತದೊಳ್ ತಾಂ ಪುಟ್ಟಿಯೂ ದೀಕ್ಷೆಯಂ। ಧರಿಸೀ ಸನ್ನುತ ಕಾವ್ಯಶಾಸ್ತ್ರಗಳನಾ ನಿರ್ಮಾಣಮಂ ಮಾಡುತಂ। ವರರತ್ನಾಕರಯೋಗಿಯೆಂದು ನಿರತಂ ವೈರಾಗ್ಯ ಬಂದೇರಲಾಂ। ಹರದೀಕ್ಷಾವ್ರತನಾದೆನೈ ಹರಹರಾ ಶ್ರೀ ಚೆನ್ನಸೋಮೇಶ್ವರಾ" ಎಂಬ ಪದ್ಯ ಇರುವುದನ್ನು ಗಮನಿಸಿ, ಈ ಕೃತಿಯ ಕರ್ತೃ ರತ್ನಾಕರವರ್ಣಿ ಇರಬೇಕು ಎಂದು ಅಭಿಪ್ರಾಯಪಟ್ಟಿದ್ದರು.

ಪಂ. ಬಿ. ಶಿವಮೂರ್ತಿಶಾಸ್ತ್ರಿ ಅವರು ಈ ಎರಡೂ ಅಭಿಪ್ರಾಯಗಳನ್ನು ಗಮನಿಸಿ–ಶತಕದಲ್ಲಿ ಇರುವ ಸ್ಪಷ್ಟ ಅಂಶಗಳನ್ನು ಪರಾಮರ್ಶಿಸಿ–ಕವಿಚರಿತೆಕಾರರು ಅಂದುಕೊಂಡಂತೆ ಪಾಲ್ಕುರಿಕೆ ಸೋಮಾರಾಧ್ಯನಿಗೂ ಸೋಮೇಶ್ವರಶತಕದ ಕರ್ತೃ ಸೋಮನಿಗೂ ಯಾವುದೇ ಸಂಬಂಧವಿಲ್ಲ. ಎಂ.ಜಿ. ನಂಜುಂಡಾರಾಧ್ಯರಿಗೆ ದೊರೆತ ಪ್ರತಿಯಲ್ಲಿನ ಪದ್ಯ ಪ್ರಕ್ಷಿಪ್ತವಾಗಿರುವುದರಿಂದ ರತ್ನಾಕರವರ್ಣಿಗೂ–ಸೋಮೇಶ್ವರಶತಕಕ್ಕೂ ಯಾವುದೇ ಸಂಬಂಧವಿಲ್ಲ–ಎಂದು ಸ್ಪಷ್ಟೋಕ್ತಿಗಳಿಂದ ನಿರಾಕರಿಸಿ, ಪುಲಿಗೆರೆಯ ಸೋಮನೇ ಇದರ ಕರ್ತೃ ಎಂದು ನಿರ್ಧರಿಸುತ್ತಾರೆ. ಇವರ ಅಭಿಪ್ರಾಯವನ್ನು ಡಿ.ಎಲ್.ಎನ್, ರಂ.ಶ್ರೀ. ಮುಗಳಿ, ಡಾ. ಎಂ. ಎಸ್. ಸುಂಕಾಪುರ, ಎನ್.ಎಸ್.ತಾರಾನಾಥ ಮೊದಲಾದವರು ಅನುಮೋದಿಸುತ್ತಾರೆ.

ಕವಿಯ ಕಾಲವನ್ನು ಕುರಿತಂತೆಯೂ ಭಿನ್ನಾಭಿಪ್ರಾಯಗಳು ತಲೆದೋರಿವೆ. ಕೃತಿಯ ಶೈಲಿಯನ್ನು ಕಂಡು ಬಿ.ಶಿವಮೂರ್ತಿಶಾಸ್ತ್ರಿ, ರಂ.ಶ್ರೀ. ಮುಗಳಿ, ಇದು ೧೬ ನೆಯ ಶತಮಾನಕ್ಕಿಂತ ಈಚೆಗೆ ರಚಿತವಾದುದಿರಬೇಕೆಂದು ಊಹಿಸುತ್ತಾರೆ. ಆದರೆ ಕೃತಿಯಲ್ಲಿಯೇ ಕಾಲಸೂಚನೆ ಇರುವುದರಿಂದ ಅದನ್ನು ಅಲ್ಲಗಳೆಯಲಾಗುವುದಿಲ್ಲ. ಅದು ಸೂಚಿಸುವ ಕ್ರಿ.ಶ. ೧೨೯೯ ಈ ಕವಿಯ ಕಾಲವಾಗಿರಬೇಕು. ಎಂದು ಸದ್ಯಕ್ಕೆ ಒಪ್ಪಿಕೊಳ್ಳಬೇಕಾಗುತ್ತದೆ ಎಂದು ಡಾ. ಎಂ.ಎಸ್.ಸುಂಕಾಪುರ, ಎನ್.ಎಸ್.ತಾರಾನಾಥ ತೀರ್ಮಾನಿಸುತ್ತಾರೆ. (ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ ಸಂ.೪, ಪು.೧೬೩; ೧೯೭೭). ಕಾಲಸೂಚಕ ಪದ್ಯದ ವಿವರ ಹೀಗಿದೆ:

ಕಲಿಯುಗದಲ್ಲಿ ನಾಲ್ಕುಸಾವಿರದಾ ನಾಲ್ಕುನೂರು ವರ್ಷ ಗತಿಸಿ ಇರುವ ವಿಕಾರಿ ನಾಮ ಸಂವತ್ಸರದಲ್ಲಿ ಕೃತಿ ಮುಕ್ತಾಯವಾಯಿತಂತೆ. ಕಣ್ಣುಪಿಳ್ಳೆಯವರ ಜಂತ್ರಿಯ ಪ್ರಕಾರ ಕಲಿಯುಗ ಗತ ವರ್ಷ ೪೪೦೦ ರಲ್ಲಿಯೇ ವಿಕಾರಿನಾಮಸಂವತ್ಸರ ಬರುತ್ತದೆ. ೪೪೦೦ ಗತಿಸಿದ ಮೇಲೂ ನಾಲ್ಕು ತಿಂಗಳು ವಿಕಾರಿನಾಮ ಸಂವತ್ಸರವಿರುತ್ತದೆ. ಆ ವರ್ಷ ಮುಗಿಯುವುದು ಕ್ರಿ.ಶ. ೧೩೦೦ ಮಾರ್ಚ ೨೧

ರಂದು. ಇದರಲ್ಲಿ ೩ ತಿಂಗಳು ಕಳೆದರೆ ಕ್ರಿ. ಶ. ೧೨೯೯ ಡಿಶೆಂಬರ್ ೨೯ ನೆಯ ದಿನಾಂಕ ಆಗುವುದು. ಕವಿಯ ಹೇಳಿಕೆಯಂತೆ ಸೋಮೇಶ್ವರ ಶತಕವು ಈ ಕಾಲಾವಧಿಯಲ್ಲಿ ರಚಿತವಾಗಿದೆ.

ಶತಕದ ಮೊದಲ ಪದ್ಯದಲ್ಲಿ ತನ್ನ ಇಷ್ಟದೈವ ಸೋಮೇಶನನ್ನು 'ಪುಲಿಗೆರೆ ಸೋಮೇಶ' ಎಂದು ಕರೆದಿರುವುದರಿಂದ 'ಪುಲಿಗೆರೆ' ಕವಿಯ ಸ್ಥಳವಾಗಿರಬೇಕು. ಇದು ಈಗಿನ ಲಕ್ಷ್ಮೇಶ್ವರವಾಗಿದೆ.

ಕವಿಯ ಮತದ ವಿಚಾರದಲ್ಲಿಯೂ ಎರಡಭಿಪ್ರಾಯಗಳಿವೆ. ಬೆಳ್ಳಾವೆ ವೆಂಕಟನಾರಾಯಣಪ್ಪನವರು "ಈತ ವೀರಶೈವನೆಂದು ಊಹಿಸಬಹುದಾದರೂ ವೀರಶೈವ ಗ್ರಂಥಗಳಲ್ಲಿ ಸಾಮಾನ್ಯವಾಗಿ ದೊರೆಯದ ವಿಷ್ಣುಪರವಾದ ಕಥೆಗಳೂ ವೀರಶೈವರು ಸಾಮಾನ್ಯವಾಗಿ ಹೇಳದ ಇತರ ಪೌರಾಣಿಕ ಕಥೆಗಳೂ ಈ ಶತಕದಲ್ಲಿ ಅನೇಕವಾಗಿ ಕಂಡುಬರುವವು.... ಆದ್ದರಿಂದ ಈ ಕವಿಯು ಮೊದಲು ಆರಾಧ್ಯಬ್ರಾಹ್ಮಣನಾಗಿದ್ದು, ತರುವಾಯ ವೀರಶೈವ ಮತವನ್ನು ಅವಲಂಬಿಸಿದವನಾಗಿರಬಹುದೆ?" ಎಂಬ ಪ್ರಶ್ನೆಯನ್ನು ಎತ್ತಿದ್ದಾರೆ. ಆದರೆ ಹೀಗೆ ನಿರ್ಣಯಿಸಲು ತಕ್ಕ ಆಧಾರಗಳೇನೂ ಇಲ್ಲ ಎಂದು ಎನ್.ಎಸ್.ತಾರಾನಾಥ ನಿರಾಕರಿಸಿದ್ದಾರೆ.

ಕವಿ ಪುಲಿಗೆರೆಯ ಸೋಮೇಶನನ್ನು ಆರಾಧ್ಯದೈವವೆಂದು ಸ್ವೀಕರಿಸಿ, ತನ್ನ ಕೃತಿಗೆ ಅಂಕಿತವಾಗಿಟ್ಟುಕೊಂಡಿರುವುದರಿಂದ, ಕೃತಿಯಲ್ಲಿ 'ಶಿವನೇ ದೇವರೊಳುತ್ತಮಂ" (ಪ.೪), "ಹರಗಿಂದುರ್ವಿಗೆ ದೈವವೆ?" (ಪ.೬), "ಶಿವನಂ ಬಿಟ್ಟವ ಶಿಷ್ಟನೆ?" (ಪ.೨೨), "ಮೃಡನೀನಲ್ಲದದಾರು ಕಾಯ್ವರು" (ಪ.೨೮), "ಶಿವಸುಜ್ಞಾನವೆ ಯೋಗಿಗಳ ನಯನಂ" (ಪ.೮೯) – ಎಂಬಂಥ ಶಿವಾಧಿಕ್ಯ ಸಾರುವ ಅನೇಕ ಉಲ್ಲೇಖಗಳು, ಶಿವಶರಣರ ಕಥೆಗಳ ದೃಷ್ಟಾಂತಗಳು ದೊರಕುವುದರಿಂದ–ಈತ ವೀರಶೈವನಾಗಿದ್ದ ಎಂಬುದು ಸ್ಪಷ್ಟವಾಗುತ್ತದೆ.

**ಸೋಮೇಶ್ವರ ಶತಕ :**

ಸೋಮೇಶ್ವರ ಶತಕದಲ್ಲಿ ೧೦೬ ಸಮವೃತ್ತಗಳಿವೆ. ಎಲ್ಲವೂ ಖ್ಯಾತಕರ್ನಾಟಕಗಳು. ಆರಂಭ ಮತ್ತು ಕೊನೆಯ ವೃತ್ತಗಳು ಸ್ರಗ್ಧರಾ; ಮಧ್ಯದ ೧೦೪ ವೃತ್ತಗಳು ಮತ್ತೇಭವಿಕ್ರೀಡಿತ. ಮೊದಲ ವೃತ್ತದಲ್ಲಿ ಇಷ್ಟದೈವ ಪುಲಿಗೆರೆ ಸೋಮೇಶನ ಸ್ತುತಿ ಇದೆ. ಎರಡನೆಯ ಪದ್ಯದಲ್ಲಿ 'ಲೋಕಜ್ಞಾನವನ್ನು ಯಾವ ಯಾವ ಮೂಲಗಳಿಂದ ಸಂಗ್ರಹಿಸಬಹುದು' ಎಂಬುದನ್ನು ತಿಳಿಸಲಾಗಿದೆ. ಮೂರನೆಯ

ಪದ್ಯದಲ್ಲಿ ಕೃತಿ ರಚನೆಯ ಉದ್ದೇಶ, ಕೃತಿ ಕರ್ತೃವಿನ ಹೆಸರು ಮತ್ತು ಕವಿಯ ವಿನಯವಂತಿಕೆಯನ್ನು ಪ್ರಕಟಿಸಲಾಗಿದೆ. ೪ ರಿಂದ ೧೦೧ ರ ವರೆಗಿನ ೯೭ ಪದ್ಯಗಳಲ್ಲಿ ನೀತಿಬೋಧೆಯನ್ನು ಮಾಡಲಾಗಿದೆ. ೧೦೨ ರಿಂದ ೧೦೫ ರ ವರೆಗಿನ ೪ ಪದ್ಯಗಳಲ್ಲಿ 'ವಚನಬ್ರಹ್ಮ' ದ ಸ್ವರೂಪವನ್ನು ನಿರೂಪಿಸಲಾಗಿದೆ. ೧೦೬ನೆಯ ಪದ್ಯದಲ್ಲಿ ಕೃತಿ ಓದಿನಿಂದ ದೊರೆಯುವ ಫಲವನ್ನು, ಕೊನೆಯ ಪದ್ಯ (೧೦೭) ದಲ್ಲಿ ಕೃತಿ ಬರೆದು ಮುಗಿಸಿದ ಕಾಲವನ್ನು ಸೂಚಿಸಲಾಗಿದೆ. ೧ ಮತ್ತು ೧೦೭ ನೆಯ ಪದ್ಯಗಳನ್ನು ಹೊರತುಪಡಿಸಿ ಉಳಿದುವೆಲ್ಲ "ಹರಹರಾ ಶ್ರೀ ಚೆನ್ನಸೋಮೇಶ್ವರಾ" ಎಂದು ಮುಕ್ತಾಯಗೊಳ್ಳುತ್ತವೆ.

'ಸೋಮೇಶ್ವರ ಶತಕ' ತುಂಬ ಜನಪ್ರಿಯವಾದ ಕೃತಿ. "ನೀತಿಯೆ ಸಾಧನಂ ಸಕಲಲೋಕಕ್ಕಾಗಬೇಕೆಂದು ಪೇಳಿದ ಸೋಮಂ" ಎಂಬ ಕವಿಯ ಮಾತಿನಿಂದ, ನೀತಿಬೋಧೆಯೇ ಇದರ ಗಮ್ಯ ಗುರಿ, ಪರಮ ಉದ್ದೇಶ ಎಂಬುದು ಸ್ಪಷ್ಟವಾಗುತ್ತದೆ. ನೀತಿ ಬದುಕಿನ ಬಹುಮುಖ್ಯ ಮೌಲ್ಯ. ಅದಿಲ್ಲದ ಜೀವನ ಚುಕ್ಕಾಣಿ ಇಲ್ಲದ ಹಡಗದಂತೆ. ಬದುಕಿನ ಬಂಡಿ ಏರಿ ಭವಸಾಗರವನ್ನು ದಾಟಲು ನೀತಿಯೆಂಬ ನಾವಿಕ ಬೇಕು. ಅದನ್ನರಿತ ಕವಿ ಈ ಕೃತಿಯನ್ನು ರಚಿಸುವ ಮೂಲಕ ಮಾನವರಿಗೆ ಮಾರ್ಗದರ್ಶನ ಮಾಡಿದ್ದಾನೆ.

ಈ ಕೃತಿಯಲ್ಲಿ ಇಡೀ ಮಾನವ ಬದುಕಿನ ರೀತಿ–ರಿವಾಜುಗಳ ಚಿತ್ರಣವಿದೆ; ಲೌಕಿಕ–ಪಾರಮಾರ್ಥದ ಬೋಧೆ ಇದೆ. ಮಾನವ ಸ್ವಭಾವ, ಸಾಮಾಜಿಕ ವ್ಯವಸ್ಥೆ, ರಾಜಕೀಯ ಸ್ಥಿತಿಗತಿ, ಲೋಕದ ವ್ಯವಹಾರ, ಒಳಿತು–ಕೆಡುಕು, ಸಜ್ಜನ–ದುರ್ಜನ, ಸುಖ–ದುಃಖ, ಶುಚಿ–ಅಶುಚಿ, ವಿಧಿ–ವಿವೇಕಗಳ ವಿವರಣೆ ಇದೆ. ಕೆಡುಕಿನ ಟೀಕೆ, ಒಳಿತಿನ ಹೆಗ್ಗಳಿಕೆ, ಸತ್ಯದ ಪ್ರಶಂಸೆ, ಅಸತ್ಯದ ದೂಷಣೆ ಇದೆ. ಒಟ್ಟಿನಲ್ಲಿ ಸುಸಂಸ್ಕೃತ ವ್ಯಕ್ತಿತ್ವ, ಸುಖೀ ಜೀವನ, ಸುಖೀ ಸಮಾಜ, ಸುಖೀ ರಾಷ್ಟ್ರ ನಿರ್ಮಾಣದ ಹಂಬಲವಿದೆ.

ಕವಿ ಸೋಮ ಈ ಲೋಕದ ವಿವಿಧ ಚಟುವಟಿಕೆಗಳನ್ನು ತೆರೆದ ಕಣ್ಣಿನಿಂದ ನೋಡಿದ್ದಾನೆ. ಅಲ್ಲಿರುವ ವೈವಿಧ್ಯ–ವೈರುದ್ಯ–ವೈಶಿಷ್ಟ್ಯಗಳನ್ನು ಗುರುತಿಸಿದ್ದಾನೆ. ಅಂಕು–ಡೊಂಕುಗಳನ್ನು ಕಂಡಿದ್ದಾನೆ. ಅವುಗಳ ಮೇಲೆ ತನ್ನ ಪ್ರತಿಕ್ರಿಯೆಗಳನ್ನು ಹರಿಬಿಟ್ಟಿದ್ದಾನೆ. ಒಳ್ಳೆಯದನ್ನು ಪುರಸ್ಕರಿಸಿದ್ದಾನೆ; ಕೆಟ್ಟದ್ದನ್ನು ಟೀಕಿಸಿ–ತಿರಸ್ಕರಿಸಿದ್ದಾನೆ. ನೈತಿಕ ಬದುಕಿನ ಶ್ರೇಷ್ಠತೆಯನ್ನು ಎತ್ತಿಹಿಡಿದಿದ್ದಾನೆ.

ಕವಿಗೆ ಈ ಎಲ್ಲ ಜ್ಞಾನ–ಸಂಸ್ಕಾರ ಎಲ್ಲಿಂದ ಬಂತು? ಆತನೆ ಹೇಳುತ್ತಾನೆ:

ಕೆಲವಂ ಬಲ್ಲವರಿಂದ ಕಲ್ತು ಕೆಲವಂ ಶಾಸ್ತ್ರಂಗಳಿಂ ಕೇಳಿ ತಾಂ
ಕೆಲವಂ ಮಾಳ್ಪವರಿಂದೆ ಕಂಡು ಕೆಲವಂ ಸ್ವಜ್ಞಾನದಿಂ ನೋಡುತಂ

ಕೆಲವಂ ಸಜ್ಜನ ಸಂಗದಿಂದಲಱಿಯಲ್ ಸರ್ವಜ್ಞನಪ್ಪಂತೆ ಕೇಳ್

ಪಲವುಂ ಪಳ್ಳ ಸಮುದ್ರವೈ ಹರಹರಾ ಶ್ರೀ ಚೆನ್ನಸೋಮೇಶ್ವರಾ –೨

ಹಲವು ಹಳ್ಳಗಳು ಸೇರಿ ಸಮುದ್ರವಾದಂತೆ ಹಲವು ಮೂಲಗಳಿಂದ ದೊರೆತ ಅನುಭವವನ್ನು ಸಂಗ್ರಹಿಸಿ ತಾನು ಸರ್ವಜ್ಞನಾಗಿದ್ದಾನಂತೆ. ಈ ಅನುಭವದ ಆಣಿಮುತ್ತುಗಳೇ ಈ ಶತಕದ ಒಂದೊಂದು ವೃತ್ತಗಳಲ್ಲಿ ಮಾಲೆ ಮಾಲೆಯಾಗಿ ಹೆಣಿಕೆಗೊಂಡಿವೆ.

ಸೋಮನಿಗೆ ಕವಿ–ವಿದ್ವಾಂಸ–ಕಾವ್ಯಗಳ ಬಗೆಗೆ ಎಲ್ಲಿಲ್ಲದ ಗೌರವ. ಅದನ್ನು 'ಕವಿಯೇ ಸರ್ವರೊಳುತ್ತಮಂ', 'ಕವಿಯಾಸ್ಥಾನಕೆ ಭೂಷಣಂ', 'ಕವೀಶ್ವರ ಸಂಗೀತದಿ ಜಾಣನಾಗೆ', 'ಕವೀಂದ್ರರ ಮಹಾದುರ್ಮಾರ್ಗಿಗಳ್, ಕಾವ್ಯದಚ್ಚರಿಯಂ ಗಾಂಪರು ಜರಿಯಲ್ ಕುಂದಾಗದು', 'ಕವಿಗೆ ವಿದ್ಯಾಮಾತೆಯೇಂ ಬಂಜೆಯೇ', 'ಬುಧನೆ ತರ್ಕದೊಳಂಜುವಂ?' 'ಕವಿತಾ ವಿದ್ಯೆ ಸುವಿದ್ಯೆ' ಎಂಬಂಥ ಮಾತುಗಳಲ್ಲಿ ವ್ಯಕ್ತಪಡಿಸಿದ್ದಾನೆ.

ಶಿವ ಮತ್ತು ಗುರುವಿನಲ್ಲಿ ಕವಿಗೆ ಅಪಾರವಾದ ಭಕ್ತಿ. ಅವರ ಶ್ರೇಷ್ಠತೆಯನ್ನು ಈ ಕೆಳಗಿನ ಮಾತುಗಳಲ್ಲಿ ಕಟ್ಟಿಕೊಟ್ಟಿದ್ದಾನೆ:

"ಹರನಿಂದುರ್ವಿಗೆ ದೈವವೆ?" "ಗುರುವಿಂದುನ್ನತ ದೈವವೆ?" "ಶಿವನೇ ದೇವರ್ಕಳ್ಗೆ ತಾನಾಸ್ಪದಂ" "ಶಿವನಂ ಬಿಟ್ಟವ ಶಿಷ್ಟನೆ?" "ಮೃಡ ನೀನಲ್ಲದದಾವ ಸಾಕುವ ಜಗಕ್ಕಂ" "ಶಿವಜ್ಞಾನವೆ ಯೋಗಿಗಳ್ಗೆ ನಯನಂ".

ಸಾಮಾನ್ಯ ಲೋಕನೀತಿಗೆ ಕೃತಿಯಲ್ಲಿ ಹೆಚ್ಚಿನ ಸ್ಥಾನ ಮೀಸಲಾಗಿದೆ. ಲೋಕದಲ್ಲಿ ಯಾವುದು ಮಾನ್ಯ. ಯಾವುದು ಅಮೂಲ್ಯ. ಯಾವುದು ಭೂಷಣ– ಎಂಬುದನ್ನು ಅನೇಕ ಉದಾಹರಣೆಗಳ ಮೂಲಕ ತಿಳಿಸಲಾಗಿದೆ.

'ಸವಿವಣಲಿ ಇನಿಮಾವು, ಸರ್ವರಸದೊಳ್ ಶೃಂಗಾರ, ಸಂಬಾರದೊಳ್ ಲವಣ, ಭಾಷೆಗೆ ಬಾಲಭಾಷೆ, ಸಿರಿಯಲ್ಲಿ ಆರೋಗ್ಯ, ದೈವಂಗಳೊಳ್ ಶಿವ, ಬಿಲ್ಲಾಳನೊಳ್ ಅಂಗಜ, ಜನ್ಮಂಗಳೊಳ್ ಮಾನವಜನ್ಮ ಶ್ರೇಷ್ಠ'.

"ಕವಿಯೇ ಸರ್ವರೊಳುತ್ತಮ; ಕನಕವೇ ಲೋಹಂಗಳೊಳ್ ಶ್ರೇಷ್ಠ; ಜಾಹ್ನವಿಯೇ ತೀರ್ಥದೊಳುನ್ನತ; ರತುನದೊಳ್ ಸ್ತ್ರೀರತ್ನವೇ ವೆಗ್ಗಳ; ರವಿಯೇ ಸರ್ವಗ್ರಹಂಗಳೊಳ್ ಬಲ್ಮೆ".

"ರವಿಯಾಕಾಶಕೆ ಭೂಷಣ; ರಜನಿಗೆ ಚಂದ್ರ ಮಹಾಭೂಷಣ; ಕುವರ ವಂಶಕೆ ಭೂಷಣ; ಸರಸಿಗೆ ಅಂಬೋಜಾತ ಭೂಷಣ; ಕವಿಯಾಸ್ಥಾನಕೆ ಭೂಷಣ".

"ಹಿತವಂ ತೋರುವ ಆತ್ಮಬಂಧು; ಪೊರೆದಾಳ್ವಂ ತಂದೆ; ಪಾತಿವ್ರತಾ

ಸತಿಯೇ ಸರ್ವಕೆ ಸಾಧನ; ಕಲಿಸಲೊಂದು ವರ್ಣಮಾತ್ರಂ ಗುರು; ಶ್ರುತಿಮಾರ್ಗಂ ಬಿಡದಾತ ಸುವ್ರತಿ; ಮಹಾಸದ್ವಿದ್ಯೆ ಪುಣ್ಯಪ್ರಭಾಸುತನೆ ಮುಕ್ತಿಗೆ ಮಾರ್ಗಂ".

"ಮಳೆಯೇ ಸರ್ವಜನಾಶ್ರಯಂ, ಬೆಳೆಯೇ ಸರ್ವರಜೀವನಂ, ಬಳೆಯೇ ಸರ್ವವಿಭೂಷಣಕ್ಕೆ ಮೊದಲ್ಕೆ, ಪುತ್ರೋತ್ಸವ ಉತ್ಸವದೊಳ್, ಕೆಳೆಯೇ ಸರ್ವರೊಳುತ್ತಮಂ".

ಇನ್ನು ಯಾವುದು ಅಮಾನ್ಯ; ಯಾವುದು ಕನಿಷ್ಠ; ಯಾವುದು ವರ್ಜ್ಯ. ಅವುಗಳ ವಿವರ ಕೆಳಗಿನಂತಿದೆ:

"ಕೊಲುವ ಕೂಟ, ನಷ್ಟಮಪ್ಪ ಕೆಲಸ, ಕೈಲಾಗದ ಆರಂಭ, ಗೆಲುವಿಲ್ಲದ ಯುದ್ಧ, ಪಾಳುನೆಲದಲ್ಲಿ ಬೇಸಾಯ, ನೀಚರ ಆಶ್ರಯ, ಹಲವು ಆಲೋಚನೆ, ಜೂಜು, ಲಾಭ– ಇತ್ಯಾದಿ ಭ್ರಾಂತಿ ಸಲ್ಲವು".

"ಅವಿನೀತಂ ಮಗನೆ?, ಅಶೌಚಿ ಮುನಿಯೆ?, ಬೈವಾಕೆ ತಾಂ ಪತ್ನಿಯೆ?, ಸವಿಗೆಟ್ಟನ್ನವದೂಟವೆ?, ಕುಜನರೊಳ್ ಕೂಡಿರ್ಪವಂ ಮಾನ್ಯನೆ?, ಬವರಕ್ಕಾಗದವ ಬಂಟನೆ?, ಎಡರಿಂಗಾಗದವ ನೆಂಟನೆ?, ಶಿವನಂ ಬಿಟ್ಟವ ಶಿಷ್ಟನೆ?– ಅಲ್ಲ".

"ಸಾಪತ್ನಿಯರಾಟ, ಸಾಲ, ಮಧುಪಾನ, ಬೇಟ, ಜಾರಿಣೀನಿವಹ ಮಾಡುವ ಮಾಟ, ದ್ಯೂತವನಾಡುತಿಹ ಪೋಟ, ಸೂಳೆಯರೊಲ್ದಿರ್ಪಾಟ–ಇವೆಲ್ಲ ಸರಿಯಲ್ಲ".

"ಘೃತವಿಲ್ಲದೂಟ, ಪರಾನ್ನಾಪೇಕ್ಷಿತ ಜಿಹ್ವೆ, ದಾರಿದ್ರ್ಯದ ಬಾಳ್ಕೆ, ಕಪಟಕೂಟ, ತಾಂಬೂಲ ವಿಹೀನ ವಕ್ತ್ರ, ಪರಸ್ತ್ರೀ ನೋಡುವ ಕಣ್ಣು–ಸೊಗಸಾಗಿ ಕಾಣವು".

"ಉಣದಿರ್ಪ ಧನ, ಮುಪ್ಪಿನಲ್ಲಾಗದ ಸುತ, ಒಣಗಿದ ಪೈರಿಗೆ ಬಾರದ ಮಳೆ, ಆಪತ್ತಿನಲ್ಲಿ ಆಸರೆಯಾಗದ ಬಂಧು, ಮಳೆಯಲ್ಲಿಕ್ಕಿದ ಜೇನು, ಶೂದ್ರ ಕಲಿತ ವಿದ್ಯೆ, ಉಚ್ಚಿಷ್ಟವಾದ ಮೃಷ್ಟಾನ್ನ, ಸರ್ಪಕಾಯ್ವ ನಿಧಾನ, ಲುಬ್ಧಾರ್ಜಿತೈಶ್ವರ್ಯ–ಇವು ಇದ್ದೇನು ಫಲ?".

ಕೊಡಬೇಕುತ್ತಮನಾದವಂಗೆ ಮಗಳಂ, ಸತ್ಪಾತ್ರಕಂ ದಾನಮಂ
ಇಡಬೇಕೀಶ್ವರನಲ್ಲಿ ಭಕ್ತಿರಸಮಂ ವಿಶ್ವಾಸಮಂ ಸ್ವಾಮಿಯೊಳ್
ಬಿಡಬೇಕೈ ಲೋಭ ಬಂಧುಜನರೊಳ್ ದುಷ್ಟಾತ್ಮರೊಳ್ ಗೋಷ್ಠಿಯಂ
ಇಡಬೇಕಿದ್ದುಣಬೇಕೆಲ್ಕೆ ಹರಹರಾಶ್ರೀ ಚೆನ್ನಸೋಮೇಶ್ವರಾ –೬೦

–ಹೀಗೆ ಲೋಕನೀತಿಯನ್ನು ಹೇಳಿದ ಕವಿ ಮುಂದೆ ರಾಜನೀತಿ, ವೇಶ್ಯಾನೀತಿ– ಇತ್ಯಾದಿಗಳನ್ನು ವಿವರಿಸುತ್ತಾನೆ.

ಅರಸ, ಮಂತ್ರಿ, ದಳವಾಯಿ, ಗಣಕ, ಶಾನಭೋಗ, ತಳವಾರ ಮೊದಲಾದವರ ಗುಣಲಕ್ಷಣ ಹಾಗೂ ಕರ್ತವ್ಯಗಳನ್ನು ರಾಜನೀತಿಪರ ಪದ್ಯಗಳಲ್ಲಿ ವಿವರಿಸಲಾಗಿದೆ.

"ಪ್ರಜೆಯಂ ಪಾಲಿಸಬಲ್ಲೊಡಾತನರಸಂ", "ಕೈಯಾಸೆಯಂ ಮಾಡದಂ ನಿಜಮಂತ್ರೀಶ್ವರ" ಎಂದು ಅರಸ ಮತ್ತು ಮಂತ್ರಿಗಳ ಮುಖ್ಯಲಕ್ಷಣವನ್ನು ಹೇಳಿ ಮುಂದೆ ಇತರ ಗುಣಾದಿಗಳನ್ನು ವಿವರಿಸುತ್ತಾನೆ.

ದೊರೆಯ ಒಡ್ಡೋಲಗದ ಚಿತ್ರ ಹೀಗಿದೆ:

"ವರವಿದ್ವಾಂಸ ಕವೀಂದ್ರ ಗಾಯಕ ಪುರಾಣಜ್ಞರ್ ಮಹಾಪಾಠಕರ್
ಪರಿಹಾಸೋಚಿತಿತಿಹಾಸ ಮಂತ್ರ ಶಕುನಜ್ಞರ್ ವಾಗ್ಮಿಗಳ್ ವೇಶಿಯರ್
ಶರಶಸ್ತ್ರಾದಿ ಸಮಸ್ತ ವಿದ್ಯೆಯಚಿದರ್ ಕಾಲಾಳು ಮೇಲಾಳಿರಲ್
ದೊರೆಯೊಡ್ಡೋಲಗ ಚೆಲ್ವುದೈ ಹರಹರಾ ಶ್ರೀ ಚೆನ್ನಸೋಮೇಶ್ವರಾ– ೬೧

ಅರಸ ಈ ಕೆಳಗಿನ ವಿಷಯಗಳಲ್ಲಿ ಎಚ್ಚರದಿಂದಿರಬೇಕಂತೆ :

ಧುರದೊಳ್ ತನ್ನಯ ವೀರರೊಳ್ ಪ್ರಜೆಗಳೊಳ್ ದಾಯಾದ್ಯರೊಳ್ ಭೃತ್ಯರೊಳ್
ಪುರದೊಳ್ ಬಂಧುಗಳೊಳ್ ಸುಭೋಜನಗಳೊಳ್ ವೈದ್ಯಂಗಳೊಳ್ ಸಂಗದೊಳ್
ಅರಿಯೊಳ್ ಜೋತಿಷಮಂತ್ರವಾದದೆಡೆಯೊಳ್ ವಿದ್ವಾಂಸರೊಳ್ ತತ್‌ಕ್ಷಣಂ
ಅರಸಂಗೆಚ್ಚರು ಬೇಕೆಲೈ ಹರಹರ ಶ್ರೀ ಚೆನ್ನಸೋಮೇಶ್ವರಾ – ೬೪

ಮಂತ್ರಿಯ ಲಕ್ಷಣಗಳೇನು ?

ಅತಿಗಂಭೀರನುದಾರಧೀರನು ಮಹಾಸಂಪನ್ನ ಸದ್ವರ್ತನೂ
ರ್ಜಿತ ನಾನಾಲಿಪಿಭಾಷೆಯೊಳ್ ಪರಿಚಿತಂ ಲಂಚಕ್ಕೆ ಕೈನೀಡದಂ
ವ್ರತಿ ಸದ್ಧರ್ಮ ವಿಚಾರಶಾಲಿ ಚತುರೋಪಾಯಂಗಳಂ ಬಲ್ಲವಂ
ಪತಿಕಾರ್ಯಂ ಪ್ರತಿಮಂತ್ರಿಯೈ ಹರಹರಾ ಶ್ರೀ ಚೆನ್ನಸೋಮೇಶ್ವರಾ – ೭೦

ಕುತಂತ್ರಿ ಗಣಕನ ಚಿತ್ರ ಹೀಗಿದೆ:

ಅಣುಮಾತ್ರಂ ನದರಿಲ್ಲದಾಣ್ಮನೆಡೆಯೊಳ್ ಲಂಚಕ್ಕೊಡಂಬಟ್ಟು ಮಾ
ರ್ಪಣಮಂ ಕೊಂಡತಿವಿತ್ತಮಂ ಕೆಡಿಸಿ ಚಾಡೀ ಕೇಳಿ ದ್ರೋಹಂಗಳಂ
ಎಣಿಸುತ್ತೆಲ್ಲರ ಬಾಳ್ಗೆ ನೀರನೆಱೆದಾರುಂ ಕಾಣದೇ ಭಕ್ಷಿಪಾ
ಗಣಕಂ ಹೆಗ್ಗಣಕಂ ಸಮಂ ಹರಹರಾ ಶ್ರೀ ಚೆನ್ನಸೋಮೇಶ್ವರಾ – ೭೩

ಹೀಗೆಯೇ ದಳವಾಯಿ, ಶಾನುಭೋಗ ತಳವಾರರು ನಡೆಸುವ ಅವ್ಯವಹಾರಗಳನ್ನೂ ಇಲ್ಲಿ ಬಿಚ್ಚಿಡಲಾಗಿದೆ (ಪದ್ಯ ೭೨, ೭೪, ೭೫).

ವೇಶ್ಯಾ ನೀತಿಯಲ್ಲಿ ಗಣಿಕಾಸ್ತ್ರೀಯರ ಸ್ವಭಾವಚಿತ್ರವನ್ನು ಚೆನ್ನಾಗಿ ಬಿಡಿಸಲಾಗಿದೆ: (ನೋಡಿ ಪದ್ಯ ೮೨, ೮೩, ೮೪, ೮೫).

ಹಣಮುಳ್ಳಂ ಹೆಣನಾದೊಡಂ ಮಮತೆಯಿಂ ತಾನಾವಗಂ ಬಿಟ್ಟಿರಳ್
ಕ್ಷಣಮಾತ್ರಂ ಬಲುಬೂಟಕಂ ಗಳಪಿ ಹರ್ಷೋತ್ಸಾಹದಿಂ ಹಾಲ ಮುಂ

ದಣ ಬೆಕ್ಕಾಡುವೊಲಾಡಿಕೊಂಡು ಧನಮುಂ ಪೋಗಲ್ಕೆ ಮಾತಾಡಳ್ಳೆ

ಗಣಿಕಾಸ್ತ್ರೀ ಗುಣಕಿಲ್ಲವೈ ಹರಹರಾ ಶ್ರೀ ಚೆನ್ನಸೋಮೇಶ್ವರಾ –೮೩

ಹಾಗೆಯೇ ಸ್ವಪ್ನದ ಫಲ, ಶಕುನದ ವಿಚಾರ (೮೭ ರಿಂದ ೯೦), ಕಡುಮೂರ್ಖರ ರೀತಿ (೫೨), ಧನಿಕರ ದರ್ಪ (೫೮,೫೯) ವಿಧಿವಶರಾಗಿ ಬಳಲಿದ ಪುರಾಣ ವ್ಯಕ್ತಿಗಳ ಪಾಡನ್ನು (೯೨,೯೩,೯೫,೯೬,೯೭) ಮಾರ್ಮಿಕವಾಗಿ ಬಣ್ಣಿಸಲಾಗಿದೆ.

ಇಡೀ ಕಾವ್ಯ ಲೋಕೋಕ್ತಿಗಳಿಂದ ಇಡಿಕಿರಿದಿದೆ. ಕೆಲವು ಸಲ ಕವಿ ಹೇಳುವ ಸೂತ್ರಬದ್ಧವಾದ ಮಾತುಗಳೇ ಲೋಕೋಕ್ತಿಗಳಾಗಿ ಪ್ರಚಾರ ಪಡೆದಿವೆ.

'ನೀತಿಯೇ ಸಾಧನಂ ಸಕಲಲೋಕಕ್ಕೆಲ್ಲ'(೩), 'ಪಾಲುಂಡು ಮೇಲುಂಬರೆ'(೪) 'ಸಖರಿಂದುನ್ನತವಸ್ತುವೆ?'(೪) 'ಸುತನೆ ಮುಕ್ತಿಗೆ ಮಾರ್ಗವೈ'(೧೧) 'ಕುಲವೆಣ್ಣಿಂಗೆಣೆಯಾವುದೈ'(೧೨), 'ಕೆಳೆಯೆ ಸರ್ವರೊಳುತ್ತಮಂ'(೧೪), 'ಸರಿಯೆ ಸೂರ್ಯಗೆ ಕೋಟಿ ಮಿಂಚುಬುಳಗಳ್, ನಕ್ಷತ್ರವೆಷ್ಟಾದೊಡಂ ದೊರೆಯೆ ಚಂದ್ರಗೆ, ಜೀವರತ್ನಕ್ಕೆಣೆಯೆ ಮಿಕ್ಕಾದ ಪಾಷಾಣಗಳ್'(೧೫) 'ಕಾಲೋಚಿತಕ್ಕೈದಿದಾ ತೃಣವೆ ಪರ್ವತವಲ್ಲವೆ' (೨೯), 'ಕೊಡುವರ್ ಕೊಂಬರು ಮರ್ತ್ಯರೆ?' (೩೨), ಹರಕೊಲ್ಲಲ್ ನರ ಕಾಯ್ವನೆ' 'ವಿಧಿಯಂ ಮೀರುವನಾರೈ' (೩೨) 'ಪಣೆಯೊಳಂ ಪೂರ್ವಾರ್ಜಿತಂ ಹಾಗಿರಲ್ ಕೊಲನೇ ಕ್ಷುದ್ರ ಸಮರ್ಥನಂ' (೩೮) 'ಚಿಗುರೆಂದುಂ ಮೆಲೆ ಬೇವು ಸ್ವಾದವಹುದೆ?' 'ಚೇಳ್ ಚಿಕ್ಕದೆಂದಳ್ಕರಿಂ ತೆಗೆಯಲ್ ಕಚ್ಚದೆ', ' ಪಾಲನೂಡಿ ಫಣಿಯಂ ಸಾಕಲ್ಕೆ ವಿಶ್ವಾಸಿಯೆ?' (೬೭) 'ಋಣಭಾರಕ್ಕೆಣೆಯಾವುದೈ', (೯೨), 'ಕೊಡುವರ್ಗಾವುದು ದೊಡ್ಡಿತೈ' (೯೩).

ಕವಿ ಸೃಷ್ಟಿಸಿದ ಸೂತ್ರಬದ್ಧ ಉಕ್ತಿಗಳು :

'ದಳವಾಯೆ ತಳವಾಯೆಲೈ' (೭೨) 'ಗಣಕಂ ಹೆಗ್ಗಣಕಂ' (೭೩) 'ತಳವಾರಂ ಬೆಳವಾರನೈ' (೭೫) 'ಗಣಿಕಾಸ್ತ್ರೀ ಗುಣಕಿಲ್ಲವೈ' (೮೩) 'ವೇಶ್ಯೆಯೆ ವಶ್ಯವೈ'(೮೪) 'ಮಡಿಯೇ ನಿರ್ಮಲಚಿತ್ತವೈ' (೧೦೧) ಇತ್ಯಾದಿ.

ಇಲ್ಲಿ ಕವಿಯ ಲೋಕಾನುಭವ ಮತ್ತು ಸ್ವಾನುಭವಗಳು ಒಟ್ಟಾಗಿಯೇ ಕೆಲಸಮಾಡಿವೆ.

ಸೋಮ ಲೋಕ ಜ್ಞಾನಿಯಷ್ಟೇ ಅಲ್ಲ, ಪ್ರತಿಭಾನ್ವಿತ ಕವಿಯೂ ಆಗಿದ್ದಾನೆ. ಇದಕ್ಕೆ ಸೋಮೇಶ್ವರ ಶತಕದಲ್ಲಿ ಅನೇಕ ನಿದರ್ಶನಗಳು ದೊರೆಯುತ್ತವೆ. ಕೆಲವು ಪದ್ಯಗಳಂತೂ ಆತನ ಕಲ್ಪನಾಶಕ್ತಿಗೆ ಹಿಡಿದ ಕನ್ನಡಿ ಎನಿಸಿವೆ. ಆತನ ಭಾಷಾ ಪ್ರಭುತ್ವ, ಛಂದೋಪರಿಣತಿ, ಪುರಾಣ ಪ್ರಜ್ಞೆಗಳಿಗೂ ಈ ಶತಕ ಒಂದು ಸ್ಪಷ್ಟ ಸಾಕ್ಷಿಯಾಗಿ ನಿಂತಿದೆ.

ಚರಿಪಾರಣ್ಯದ ಪಕ್ಷಿಗೊಂದು ತರುಗೊಡ್ಡಾಗಲ್ ಫಲಂ ತೀವಿದಾ
ಮರಗಳ್ ಪುಟ್ಟವೆ ಪುಷ್ಪವೊಂದು ಬಳಲಲ್ ಭೃಂಗಕ್ಕೆ ಪೂವಿಲ್ಲವೇ
ನಿರುತಂ ಸತ್ಕವಿಗೊರ್ವ ಗರ್ವಿ ಪುಸಿಯುತ್ತುಂ ಲೋಭಿಯಾಗಲ್ ನಿಜಂ
ಧರೆಯೊಳ್ ದಾತರು ಪುಟ್ಟರೆ ಹರಹರಾ ಶ್ರೀ ಚೆನ್ನಸೋಮೇಶ್ವರಾ–೩೧

ಉಡುರಾಜಂ ಕಳೆಗುಂದಿ ಪೆರ್ಚದಿಹನೇ ನ್ಯಗ್ರೋಧಬೀಜಂ ಕೆಲಂ
ಸಿಡಿದುಂ ಪೆರ್ಮರನಾಗದೇ ಎಳೆಗಱುಂ ಎತ್ತಾಗದೆ ಲೋಕದೊಳ್
ಮಿಡಿಪಣ್ಣಾಗದೆ ದೈವದೊಲ್ಮೆಯಿರಲು ಕಾಲಾನುಕಾಲಕ್ಕೆ ತಾಂ
ಬಡವಂ ಬಲ್ಲಿದನಾಗನೇ ಹರಹರಾ ಶ್ರೀ ಚೆನ್ನಸೋಮೇಶ್ವರ–೪೪

ಇವು ಆತನ ಕವಿತ್ವ ಶಕ್ತಿಗೆ ಉದಾಹರಣೆಗಳು.

ಹೆಜ್ಜೆ ಹೆಜ್ಜೆಗೆ ಬಳಸುವ ಪುರಾಣವ್ಯಕ್ತಿಗಳ ದೃಷ್ಟಾಂತಗಳು ಕವಿಯ ಪುರಾಣ ಪ್ರಜ್ಞೆಯನ್ನು ಎತ್ತಿ ತೋರಿಸುತ್ತವೆ.

ಮೃಡ ತಾಂ ಭಿಕ್ಷವಬೇಡನೆ, ದ್ರುಪಜೆ ತಾಂ ತೊತ್ತಾಗಳೆ ಪಾಂಡವರ್
ಪಿಡಿದೋಡಂ ತಿರಿದುಣ್ಣರೆ ಖಳನ ಕೈಯೊಳ್ ಸಿಕ್ಕಳೆ ಸೀತೆ ತಾಂ
ಸುಡುಗಾಡಕ್ಕಿಗೆ ಬಂಟನಾಗನೆ ಹರಿಶ್ಚಂದ್ರಂ ನರರ್ ಪೂರ್ವದೊಳ್
ಪಡೆದಷ್ಟುಣ್ಣದೆ ಪೋಪರೇ ಹರಹರಾ ಶ್ರೀ ಚೆನ್ನಸೋಮೇಶ್ವರಾ–೩೫

ಹೀಗೆಯೇ ೩೭, ೩೮, ೩೯, ೪೧, ೪೩, ೪೬, ೪೭, ೪೮, ೬೬, ೭೭, ೭೮, ೮೬, ೯೨, ೯೩, ೯೫, ೯೬, ೯೭ ಮೊದಲಾದ ಪದ್ಯಗಳನ್ನು ನೋಡಬಹುದು.

ಭಾಷೆಯ ಬಳಕೆಯಲ್ಲಿ ಕವಿ ಬಂಧುರತೆಗಿಂತ ಸರಳತೆಯತ್ತ ಒಲವು ತೋರಿದ್ದಾನೆ. ಸಾಮಾನ್ಯರಿಗೂ ತನ್ನ ಕಾವ್ಯ ಸುಲಭವೇದ್ಯವಾಗಬೇಕು; ತಾನು ಹೇಳುವ ನೀತಿ ಅವರ ಹೃದಯಕ್ಕೆ ನಾಟಬೇಕು; ಅದರಿಂದ ಅವರ ಬಾಳು ಹಸನಾಗಬೇಕು ಎನ್ನುವ ಆಶಯ ಇಟ್ಟುಕೊಂಡಿರುವುದರಿಂದ ಅದಕ್ಕೆ ಅನುಗುಣವಾಗಿ ಸರಳ, ಸರಸ ಭಾಷೆಯನ್ನು ಬಳಸಿದ್ದಾನೆ. ನಿರೂಪಣೆಯಲ್ಲಿ ನಿರರ್ಗಳತೆ ಮೈವೆತ್ತಿದೆ. ಖ್ಯಾತ ಕರ್ನಾಟಕ ವೃತ್ತ–ಅದರಲ್ಲಿಯೇ ಮತ್ತೇಭವಿಕ್ರೀಡಿತ ವೃತ್ತ ರಚಿಸುವಲ್ಲಿ ಆತನ ಛಂದೋಪರಿಣತಿ ಎದ್ದು ಕಾಣುತ್ತದೆ. ಲೀಲಾಜಾಲವಾಗಿ ವೃತ್ತಗಳನ್ನು ಹೆಣೆಯುತ್ತಾನೆ. ಕಾವ್ಯದ ಓಟಕ್ಕೆ ಎಲ್ಲಿಯೂ ಅಡೆತಡೆ ಉಂಟಾಗಿಲ್ಲ.

"ಭಾವಕ್ಕೆ ಅನುಗುಣವಾದ ಭಾಷೆ; ಮಾತಿಗೊಂದು ಮಾರ್ಮಿಕ ಗಾದೆ. ಹಸಿಗೋಡೆಯಲ್ಲಿ ಹರಳು ಇಟ್ಟಂತೆ. ಒಂದೊಂದು ನಾಣ್ನುಡಿಗೆ ಒಂದೊಂದು ದೃಷ್ಟಾಂತ. ಕವಿಯ ನುಡಿಗೆ ಹುಸಿ ಎಂಬುದೇ ಇಲ್ಲ" (ಡಾ. ಎಂ. ಎಸ್.

ಸುಂಕಾಪುರ-ನಿಜಲಿಂಗ ಶತಕ ಮತ್ತು ಸೋಮೇಶ್ವರ ಶತಕ. ಪ್ರಸ್ತಾವನೆ. ಪು. ೨೩, ೧೯೬೯)

"ಈ ಶತಕದಲ್ಲಿ ಸಂಸ್ಕೃತ ಸುಭಾಷಿತಗಳ ಛಾಯಾನುವಾದವಿದ್ದಂತೆ, ಸ್ವತಂತ್ರವಾದ ಲೋಕಾನುಭವ, ಧರ್ಮವಿವೇಕ, ಮಾರ್ಮಿಕತೆ, ಕವಿತ್ವಶಕ್ತಿ ಇವು ಮೆಚ್ಚುವಂತಿವೆ" (ರಂ. ಶ್ರೀ. ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ, ಪು.೧೮೨, ೧೯೭೧)

ವಿದ್ವಾಂಸರ ಈ ಅಭಿಪ್ರಾಯಗಳು ಅನುರೂಪವಾಗಿವೆ.

ಒಟ್ಟಿನಲ್ಲಿ ಸೋಮೇಶ್ವರ ಶತಕಕ್ಕೆ 'ನೀತಿಶತಕ'ಗಳ ಸಾಲಿನಲ್ಲಿ ಒಂದು ಉನ್ನತ ಸ್ಥಾನ ಮೀಸಲಾಗಿದೆ.

## ನಿಜಲಿಂಗಾರಾಧ್ಯ

ಈತನ ವಿಷಯವಾಗಿ ಯಾವುದೇ ಮಾಹಿತಿ ದೊರೆತಿಲ್ಲ. ಕವಿಚರಿತೆಕಾರರು ಈತನನ್ನು ಪರಿಚಯಿಸುತ್ತ "ಈತ ನಿಜಲಿಂಗಶತಕವನ್ನು ಬರೆದಿದ್ದಾನೆ. ಇವನು ವೀರಶೈವಕವಿ. ತುಂಗಭದ್ರಾತೀರದಲ್ಲಿರುವ ಖಾದ್ರಿಪುರದ ನಿಜಲಿಂಗೇಶ್ವರನ ಅಂಕಿತದಲ್ಲಿ ಈ ಗ್ರಂಥವನ್ನು ಬರೆದಿರುವುದರಿಂದ ಬಹುಶಃ ಆ ಸ್ಥಳದವನಾಗಿರಬಹುದು. ಇವನ ಕಾಲವು ಸು. ಕ್ರಿ.ಶ. ೧೮೦೦ ಆಗಿರಬಹುದೆಂದು ಊಹಿಸುತ್ತೇವೆ" ಎಂದು ಹೇಳಿದ್ದಾರೆ(ಕ.ಕ.ಚ. ಭಾಗ-೩, ಪು.೧೫೬: ೧೯೨೯).

ಡಾ. ಎಂ. ಎಸ್. ಸುಂಕಾಪುರ ಅವರು ನಿಜಲಿಂಗಶತಕದ ಕರ್ತೃವನ್ನು ಕುರಿತು ಹೀಗೆ ಹೇಳುತ್ತಾರೆ: "ಈ ಶತಕವನ್ನು ರಚಿಸಿದ ಕವಿ ನಿಜಲಿಂಗಾರಾಧ್ಯನೆಂದು ನಂಬಲಾಗಿದೆ. ಶತಕದಲ್ಲಿ ಕವಿ ತನ್ನ ನಾಮ ನಿರ್ದೇಶನವನ್ನು ಮಾಡಿಲ್ಲ. ಈ ಶತಕದ ಕರ್ತೃ 'ನಿಜಲಿಂಗ'ನೆಂದು ಹೇಳುವುದು ನಾಡಿನ ಈ ಭಾಗದಲ್ಲಿ ರೂಢಿಯಾಗಿದೆ. ಸಾಮಾನ್ಯವಾಗಿ ಕವಿಯು ಹೆಸರಿನಲ್ಲಿ ಶತಕವನ್ನು ಸಂಬೋಧಿಸುವುದುಂಟು. ಹೀಗಾಗಿ ನಿಜಲಿಂಗಶತಕದ ಕರ್ತೃ ನಿಜಲಿಂಗನೆಂದು ಜನತೆ ನಂಬುವುದು ಸಾಧ್ಯವಿದೆ. ಬಲವಾದ ಆಧಾರಗಳು ದೊರೆಯುವವರೆಗೆ ಇದೇ ಹೆಸರನ್ನೇ ಹೇಳಬೇಕಾಗುತ್ತದೆ....ನಿಜಲಿಂಗಾರಾಧ್ಯನು ತುಂಗಭದ್ರಾತೀರದಲ್ಲಿರುವ ಖಾದ್ರಿಪುರದವನೆಂದು ದಿ. ಆರ್. ನರಸಿಂಹಾಚಾರ್ಯರು ಹೇಳಿರುವುದು ಸರಿಯಲ್ಲವೆಂದು ಹೇಳಬೇಕು. ಗಡಿಬಿಡಿಯಲ್ಲಿ 'ಕದ್ರುಭವಪುರ' ಎಂಬುದನ್ನು 'ಖಾದ್ರಿಪುರ'ಎಂದು ಓದಿಕೊಂಡರೋ ಏನೋ? ಇಲ್ಲವೆ ಅವರಿಗೆ ದೊರೆತ ಹಸ್ತಪ್ರತಿಯಲ್ಲಿ ಹಾಗೇ ಬರೆದಿತ್ತೋ ಏನೋ? ಆದರೆ ನಮಗೆ ದೊರೆತ ಎಲ್ಲ

ಪ್ರತಿಗಳಲ್ಲಿ 'ಖಾದ್ರಿಪುರ'ವೆಂದು ಹೇಳಿಲ್ಲ. ಶತಕದ ಕೊನೆಯ ಪದ್ಯದಲ್ಲಿ "ತುಂಗಭದ್ರ ತೀರದೊಳೆಸೆವ ಕದ್ರುಭವಪುರವಾಸ ನಿಜಲಿಂಗ ಭವಭಂಗ ಶರಣಜನ ವರದ ಜಯತು" ಎಂದು ಸ್ಪಷ್ಟವಾಗಿ ಬರೆಯಲಾಗಿದೆ. ಕದ್ರುಭವ ಎಂದರೆ ಸರ್ಪ, ಹಾವು ಎಂದು ಅರ್ಥ. 'ಕದ್ರುಭವಪುರ' ಎಂದರೆ 'ಹಾವನೂರು' ಎಂದಾಗುವುದು. ತುಂಗಭದ್ರಾತೀರದಲ್ಲಿ 'ಖಾದ್ರಿಪುರ' ಎಂಬ ಗ್ರಾಮ ಇಲ್ಲ. ಗುತ್ತಲದ ಸಮೀಪದಲ್ಲಿ 'ಹಾವನೂರು' ಎಂಬ ಒಂದು ಗ್ರಾಮವಿದೆ. ಮತ್ತು ನಮ್ಮಲ್ಲಿದ್ದ ಒಂದು ಪ್ರತಿಯ ರಟ್ಟಿನ ಮೇಲೆ "ನಿಜಲಿಂಗ ಗುತ್ತಳದ ವಾರ್ಧಿಕ ಷಟ್ಪದಿ" ಎಂದು ಬರೆಯಲಾಗಿದೆ. ಇದರಿಂದ ನಿಜಲಿಂಗಾರಾಧ್ಯನು ಗುತ್ತಲಗ್ರಾಮಕ್ಕೆ ಸಂಬಂಧಪಟ್ಟವನೆಂದು ನಂಬಲು ಆಧಾರದ ಎಳೆ ಸಿಗುತ್ತದೆ. ಇಷ್ಟೇ ಅಲ್ಲದೆ ಶತಕದಲ್ಲಿ ಹೇಳಿದ "ಕದ್ರುಭವಪುರದ ನಿಜಲಿಂಗೇಶ್ವರನು" ಕವಿಯ ಇಷ್ಟದೈವವಾಗಿದ್ದಾನೆ. ಹಾವನೂರು ಗುತ್ತಲದ ಸಮೀಪದಲ್ಲಿದೆ. ಹಾವನೂರಲ್ಲಿ ಸಿದ್ಧೇಶ್ವರ ದೇವಾಲಯವಿದ್ದು ಇಂದಿಗೂ ಪುಣ್ಯಕ್ಷೇತ್ರವಾಗಿದೆ. ಆ ಸಿದ್ಧೇಶ್ವರನೇ ಕವಿಯ ಇಷ್ಟದೇವತೆ ನಿಜಲಿಂಗನಾಗಿರಲು ಸಾಧ್ಯವಿದೆ. ಹೀಗಿರಲು ತುಂಗಭದ್ರತೀರದಲ್ಲಿ ಸಮಿಸಮೀಪವಾಗಿರುವ ಹಾವನೂರು, ಗುತ್ತಲಗ್ರಾಮಗಳು ನಿಜಲಿಂಗಾರಾಧ್ಯನು ಹುಟ್ಟಿ, ಬಾಳಿದ ಸ್ಥಳಗಳಾಗಿರಬೇಕೆನಿಸುತ್ತದೆ". (ಪೂರ್ವೋಕ್ತ ಪ್ರಸ್ತಾವನೆ.ಪು.೧೨-೧೩).

ಈಗ ದೊರೆತ ಎಲ್ಲ ಹಸ್ತಪ್ರತಿಗಳಲ್ಲಿಯೂ 'ಕದ್ರುಭವಪುರ' ಎಂದೇ ಇರುವುದರಿಂದ ಅದರ ಕನ್ನಡ ರೂಪ 'ಹಾವನೂರು' ಎಂಬುದೇ ಕವಿಯ ಸ್ಥಳವಾಗಿದೆ ಎಂದು ಸ್ಪಷ್ಟವಾಗುತ್ತದೆ. ನಿಜಲಿಂಗೇಶ ಈತನ ಇಷ್ಟದೈವ. ಅದೇ ಹೆಸರನ್ನು ಈ ಕವಿಗೆ ಇಡಲಾಗಿದೆ. ಹೀಗಾಗಿ ಕವಿಯ ಹೆಸರಿನಿಂದಲೇ ಈ ಶತಕ ಪ್ರಸಿದ್ಧವಾಗಿದೆ –ಎಂದು ಹೇಳಬಹುದು.

ಕೃತಿಯಲ್ಲಿ ಅದರ ರಚನಾ ಕಾಲದ ವಿಷಯವೂ ಉಲ್ಲೇಖವಾಗಿಲ್ಲ. ಅನ್ಯ ಮೂಲಗಳಿಂದಲೂ ಈ ಕುರಿತು ಯಾವುದೇ ಆಧಾರಗಳು ಸದ್ಯಕ್ಕೆ ಲಭ್ಯವಿಲ್ಲ. ಹೀಗಾಗಿ ನಿಜಲಿಂಗಾರಾಧ್ಯನ ಕಾಲವೂ ನಿಶ್ಚಿತವಾಗಿಲ್ಲ. ಕವಿಚರಿತ್ರೆಕಾರರು ಕೃತಿಯ ಭಾಷಾಶೈಲಿಯನ್ನು ಗಮನಿಸಿ ಈ ಕವಿ ಕ್ರಿ.ಶ. ೧೮೦೦ರಲ್ಲಿ ಬಾಳಿಬದುಕಿರಬೇಕು ಎಂದು ಊಹಿಸಿದ್ದಾರೆ. ಇದನ್ನು ಡಾ. ಎಂ. ಎಸ್. ಸುಂಕಾಪುರ ಮೊದಲಾದವರೂ ಸಮ್ಮತಿಸಿದ್ದಾರೆ. ಬೇರೆ ಹೆಚ್ಚಿನ ಆಧಾರಗಳು ದೊರೆಯುವವರೆಗೆ ಇದನ್ನೇ ಒಪ್ಪಿಕೊಳ್ಳಬಹುದು.

ನಿಜಲಿಂಗಾರಾಧ್ಯನ ಹೆಸರು, ಇಷ್ಟದೈವ, ಆತನ ಕೃತಿಯಲ್ಲಿ ವಿಶೇಷವಾಗಿ ಬರುವ ಶಿವಸ್ತುತಿ ಮುಂತಾದವುಗಳನ್ನು ಗಮನಿಸಿದರೆ ಈತ 'ವೀರಶೈವ' ಮತಕ್ಕೆ

ಸೇರಿದವನಿರಬೇಕು ಎಂಬುದು ಸ್ಪಷ್ಟವಾಗುತ್ತದೆ. ಕವಿಚರಿತೆಕಾರರೂ ಹಾಗೇ ಗುರುತಿಸಿದ್ದಾರೆ. ಉಳಿದವರೂ ಇದನ್ನು ಅನುಮೋದಿಸುತ್ತ ಬಂದಿದ್ದಾರೆ.

**ನಿಜಲಿಂಗಶತಕ:**

'ನಿಜಲಿಂಗಶತಕ' ನಿಜಲಿಂಗಾರಾಧ್ಯನ-ಸದ್ಯಕ್ಕೆ ದೊರೆತ-ಏಕೈಕ ಕೃತಿ. ಇದರಲ್ಲಿ ಆರಂಭದಲ್ಲಿ ಮೂರುಸಾಲಿನ ಪಲ್ಲ, ಅನಂತರ ೧೦೦ ವಾರ್ಧಕ ಷಟ್ಪದಿಗಳು ಇವೆ. ಪ್ರತಿಪದ್ಯ 'ನಿಜಲಿಂಗ ಭವಭಂಗ ಶರಣಜನವರದ ಜಯತು'ಎಂದು ಮುಕ್ತಾಯಗೊಳ್ಳುತ್ತವೆ. ''ನಿತ್ಯ ನಿರುಪಮ ವಿಶ್ವಮೂರ್ತಿ ನಿಜಲಿಂಗೇಶನುತ್ತಮೋತ್ತಮವೆನಿಪ ಶತಕವನು ಬಲ್ಲಂತೆ ಬಿತ್ತರಿಪೆ" ಎಂದು ಕಾವ್ಯ ಆರಂಭಿಸುವ ಕವಿ ಮುಂದೆ ಉದ್ದಕ್ಕೂ ಶಿವನ ಲೀಲಾ ವಿಲಾಸವನ್ನು ಅನೇಕ ವಿಶೇಷಣ ಮತ್ತು ದೃಷ್ಟಾಂತಗಳ ಮೂಲಕ ಹೇಳುತ್ತ ಸಾಗುತ್ತಾನೆ. ಯಾವೊಂದು ಪದ್ಯವೂ ಶಿವಸ್ತುತಿಯಿಂದ ಹೊರತಾಗಿಲ್ಲ. ಏನನ್ನು ಹೇಳಿದರೂ ಅದು ಶಿವನಿಂದಲೇ ಆದುದು, ಶೀವನೇ ಅದಕ್ಕೆ ಕಾರಣಕರ್ತ. ಹೀಗಾಗಿ ಮಾನವ ತನ್ನೆಲ್ಲ ಸುಖ-ದುಃಖ, ಭವಬಂಧನಗಳಿಂದ ಬಿಡುಗಡೆ ಹೊಂದಲು ಶಿವನಿಗೆ ಮಾತ್ರ ಮೊರೆ ಹೋಗಬೇಕು ಎಂದು ತಿಳಿಸುತ್ತಾನೆ. ಒಂದರಿಂದ ಹತ್ತರ ವರೆಗಿನ ಪದ್ಯಗಳನ್ನು ಒಗಟಿನ ರೂಪದಲ್ಲಿ ಬೆಡಗಿನ ಭಾಷೆಯಲ್ಲಿ ಹೆಣೆದಿದ್ದಾನೆ. ಅವು ಶಿವನ ಮಹಿಮಾತಿಶಯಗಳನ್ನೆ ಹೇಳುತ್ತವೆ. ಸುಲಭವಾಗಿ ತಿಳಿಯದ ಅವನ್ನು ಅರ್ಥೈಸಿಕೊಳ್ಳಲು ಓದುಗ ಕಷ್ಟಪಡಬೇಕಾಗುತ್ತದೆ. ಶಾಸ್ತ್ರ-ಪುರಾಣಗಳ ಮೊರೆ ಹೋಗಬೇಕಾಗುತ್ತದೆ.

ಹನ್ನೊಂದರಿಂದ ಮೂವತ್ತರ ವರೆಗಿನ ಪದ್ಯಗಳಲ್ಲಿ ಶಿವನ ಸಂಸಾರ ಚಿತ್ರವನ್ನು ಶೃಂಗಾರಮಯವಾಗಿ ಬಿಡಿಸಲಾಗಿದೆ. ಅಲ್ಲಿ ಶಿವನು ಪಾರ್ವತಿಯೊಡನೆ ಗೈದ ಸರಸ ಸಲ್ಲಾಪ, ಅವನು ಧರಿಸಿದ ವಿಶಿಷ್ಟ-ವಿಚಿತ್ರ ವೇಷಭೂಷಣ, ಅವನು ಲೋಕಕಲ್ಯಾಣಕ್ಕಾಗಿ ಮಾಡಿದ ಅನೇಕ ಅದ್ಭುತ ಕಾರ್ಯಗಳನ್ನು ಮನದುಂಬಿ ಬಣ್ಣಿಸಲಾಗಿದೆ. ೩೧ ರಿಂದ ೪೦, ೫೭ ರಿಂದ ೬೦ ಮತ್ತು ೮೭ ರಿಂದ ೯೦ರ ವರೆಗಿನ ಪದ್ಯಗಳಲ್ಲಿ ಲೋಕನೀತಿಯನ್ನು ನಿರೂಪಿಸಿದರೆ, ೪೦ ರಿಂದ ೫೦ ರವರೆಗಿನ ಪದ್ಯಗಳಲ್ಲಿ ಮೂರ್ಖರು ಮತ್ತು ಜಾಣರ ಗುಣಲಕ್ಷಣಗಳನ್ನು ತಿಳಿಸಲಾಗಿದೆ. ೫೧ ರಿಂದ ೫೫ ಮತ್ತು ೭೭ ರಿಂದ ೮೦ ರ ವರೆಗಿನ ಪದ್ಯಗಳಲ್ಲಿ ಜೀವಾತ್ಮನ ಹುಟ್ಟು, ಬಾಲ್ಯ, ಯೌವ್ವನ, ಮುಪ್ಪು-ಅವುಗಳಲ್ಲಿ ಆತ ಅನುಭವಿಸುವ ಕಷ್ಟ-ಸುಖಗಳನ್ನು ವರ್ಣಿಸಲಾಗಿದೆ. ಮನದ ಚಂಚಲತೆ, ಕಾಮನ ಅಂಡಲೆ, ಧನದ ಮದ, ಕ್ರೋಧ ಲೋಭ ಮೋಹ ಮತ್ಸರಗಳ ಉಪಟಳ, ಕುಟಿಲರು-ಕುಹಕಿಗಳು, ಚೋರರು,

ವಿಶ್ವಾಸದ್ರೋಹಿಗಳು, ನೀತಿಹೀನರ ಸ್ವಭಾವ ಚಿತ್ರವನ್ನು ಕೊಡಲಾಗಿದೆ. ೯೬ ರಿಂದ ೯೮ ರವರೆಗಿನ ಪದ್ಯಗಳಲ್ಲಿ ಅರವತ್ನಾಲ್ಕು ವಿದ್ಯೆ, ಹಲವು ಶಾಸ್ತ್ರ, ಛಪ್ಪನ್ನ ಭಾಷೆಗಳ ಕಲಿತರೇನು 'ಪರಮಾತ್ಮ ವಿದ್ಯೆ' ಗೆ ಅವು ಸಮನಲ್ಲ ಎಂದು ಹೇಳಲಾಗಿದೆ. ಕೊನೆಯ ಎರಡು ಪದ್ಯಗಳಲ್ಲಿ ಮತ್ತೆ ಶಿವಸ್ತುತಿ ಮಾಡಿ, ಕವಿಯ ಇಷ್ಟದೈವ ಇರುವ ಸ್ಥಳವನ್ನು 'ತುಂಗಭದ್ರತೀರದೊಳೆಸೆವ ಕದ್ರುಭವಪುರವಾಸ ನಿಜಲಿಂಗ" ಎಂದು ತಿಳಿಸಿ, ಮುಗಿಸಲಾಗಿದೆ.

'ನಿಜಲಿಂಗಶತಕ' ಮುಖ್ಯವಾಗಿ ಭಕ್ತಿ-ಜ್ಞಾನ-ವೈರಾಗ್ಯ-ನೀತಿಯನ್ನು ಬೋಧಿಸಲೆಂದೇ ರಚಿತವಾದ ಕೃತಿ. ಇಲ್ಲಿ ಶಿವಭಕ್ತಿಗೆ  ಅಗ್ರಸ್ಥಾನ ಸಂದಿದೆ. ಕಾವ್ಯದ ಪ್ರತಿಯೊಂದು ಪದ್ಯವೂ ಶಿವಭಕ್ತಿ ಸ್ಪರ್ಶವನ್ನು ಪಡೆದಿದೆ. ಇಡೀ ಕಾವ್ಯದ ತುಂಬ ಶಿವಭಕ್ತಿಯ ಗಂಧ-ಗಾಳಿ ಸೂಸಿದೆ.

ಕವಿ ನಿಜಲಿಂಗಾರಾಧ್ಯ ಉತ್ಕಟ ಶಿವಭಕ್ತ. ಆತನ ಶಿವಭಕ್ತಿ ನಿಷ್ಠೆಗೆ ಕೊನೆಮೊದಲೆಂಬುದಿಲ್ಲ. ಅದು ನಾನಾ ರೂಪದಲ್ಲಿ, ನಾನಾ ವಿಧ ಉಕ್ತಿಗಳಲ್ಲಿ ವ್ಯಕ್ತವಾಗಿದೆ. "ನಿಜಲಿಂಗ ಭವಭಂಗ ಶರಣಜನ ವರದ ಜಯತು" ಎಂಬ ನುಡಿಯಲ್ಲಿ ಹೆಜ್ಜೆ ಹೆಜ್ಜೆಗೆ ಉದ್ಘೋಷಗೊಂಡಿದೆ.

'ಹರ ನಿನಗಿಂದಾರು ಪಿರಿಯರಿಲ್ಲ' 'ಪಿಂಡಾಂಡ ಬ್ರಹ್ಮಾಂಡದೊಳು ತುಂಬಿ ನಲಿನಲಿದು ನೀನೆ ನೀನಾಗಿಪ್ಪೆ ಜಗದೊಡೆಯ' 'ನಿಮ್ಮ ಸತ್ಕೃತಿಯ ಬಲ್ಲವರಾರು?' 'ನಿಮ್ಮ ಕಟ್ಟಳೆಗೆ ಸರಿಯುಂಟೆ?' 'ಸ್ವಯಂಜ್ಯೋತಿ ದೇವ ನೀನಹುದು' 'ದುರಿತಾದ್ರಿ ಶಂಬ ನೀನಹುದು' 'ಶಿವ ನಿಮ್ಮ ಸ್ಮರಣೆಯ ಬಿಡಲುಂಟೆ?' 'ನಿನ್ನ ನಿಂದಿಸುವವರು ನರಕದೊಳು ಸೇರುವರು' 'ನಿಮ್ಮ ನಾಮವನು ಸ್ಮರಿಸದವ ಘನ ಮೂರ್ಖ' ' ನಿನ್ನ ಚಾರಿತ್ರವನ್ನು ಜರಿವವ ಮೂರ್ಖ' 'ನಿಮ್ಮ ಚರಣವ  ನಂಬಿದವ ಜಾಣ' ' ಇಂದುಶೇಖರ ನಿಮ್ಮ ಪೂಜಿಪನು ಜಾಣ' 'ದೇವಾಧಿದೇವೇಶ ನಿಮ್ಮಿರವ ಬಣ್ಣಿಸಲರಿದು'.

"ಶಿವ ನಿಮ್ಮ ಸ್ತುತಿಸಲು ರಗೇಂದ್ರನಂತಿರಬೇಕು
ಶಿವ ನಿಮ್ಮ ನೋಡುವರೆ ಸುರಪನಂತಿರಬೇಕು
ಶಿವ ನಿಮಗೆ ಪುಷ್ಪಾರ್ಚನೆಯ ಮಾಡುವರೆ ಕಾರ್ತಿವೀರ್ಯನಂತಿರಲುಬೇಕು
ಶಿವ ನಿಮ್ಮ ಪೂಜಿಸಲು ಬಾಣನಂತಿರಬೇಕು
ಶಿವ ಕತೆಯ ಕೇಳೆ ರಾವಣನಂತೆಯೆನಗೆಯಿಂ
ತಿವನೆಲ್ಲ ಕೊಡದಾದೆ ನಿಜಲಿಂಗ ಭವಭಂಗ ಶರಣಜನ ವರದ ಜಯತು"
"ನಿನ್ನ ನಾಮಾಮೃತವ ಹಾಯೆಂದು ಸವಿವಂತೆ

ನಿನ್ನ ನಾಮಾಮೃತವ ನುತಿಸಿಯಡಿಗಡಿಗೆ ನಲಿವಂತೆ
ನಿಮ್ಮ ನಾಮವ ನೆನೆದು ಹರುಷಾಬ್ಧಿಯೊಳು ಬಿದ್ದು ಮುಳುಗಿ ನಲಿದಾಡುವಂತೆ
ನಿಮ್ಮ ನಾಮವ ನುತಿಸಿಯೆನ್ನ ಮೈಮರೆವಂತೆ
ನಿಮ್ಮ ನಾಮವು ಸತತ ಮರೆಯದೊಲಿರುವಂತೆ
ನಿನ್ನ ನಾಮದೊಳಿರಿಸು ನಿಜಲಿಂಗಭವಭಂಗ ಶರಣಜನವರದ ಜಯತು"

"ಸ್ಥಿರಪದವು ಬರುತಿರ್ಪ ಚರಿತವನು ಪಿಡಿವಂತೆ
ಮರಮರಳಿ ಭವಕೆ ಬಹ ಚರಿತವನು ತೊರೆವಂತೆ
ನರಲೋಕದಾಟದೊಳಗಿದ್ದುದಕೆ ಮನವ ತೊಡಕಿಸದೆ ಹೊರಗಾಗುವಂತೆ
ನಿರುತದಿಂದಾತ್ಮದೊಳು ಶಿವನಿಮ್ಮ ರೂಪವನು
ಅರಿವಂತೆ ಮರೆವಂತೆ ಕರೆವಂತೆ ಬೆರೆವಂತೆ
ವರವಿತ್ತು ಸಲಹುದು ನಿಜಲಿಂಗ ಭವಭಂಗ ಶರಣಜನವರದ ಜಯತು"

"ನಿನ್ನಿಂದ ನಡೆವುದನು ನಿನ್ನಿಂದ ನುಡಿವುದನು ನಿನ್ನಿಂದ ಸಕಲ ಸುಖ–ದುಃಖಗಳನನುಭವಿಸಿಕೊಂಡಿಪ್ಪ ಬಡವ ನಾನು. ಪನ್ನಂಗಭೂಷಣನೆ ನಿನ್ನ ನಾಮವ ಮರೆಯದಂತೆ ಸದ್ಗುಣವಿತ್ತು ಎನ್ನ ಸಲಹುದಯ್ಯ"

"ತೆಂಗಿನೊಳು ವಿಮಲೋದಕವ ಹಾಕಿದವರಾರು? ಭೃಂಗವೈರಿಗೆ ಪರಿಮಳವನು ಕೊಟ್ಟವರಾರು? ಕಂಗೊಳಿಪ ನವಿಲಿಂಗೆ ಬಗೆಬಗೆಯ ಬಣ್ಣವನು ನಿರ್ಮಿಸಿದವರಾರು? ರಂಗುಬಣ್ಣವನು ಪವಳಕೆ ಸಾರ್ಚಿದವರಾರು? ಮಂಗಳಾತ್ಮಕನೆ ನೀನಲ್ಲದಿನ್ನಾರುಂಟು? ಹಿಂಗದೆನ್ನನುಸಲಹು"
– ಇದು ನಿಜಲಿಂಗಾರಾಧ್ಯನ ಶಿವಭಕ್ತಿಯ ಸ್ವರೂಪ.

ಪ್ರಪಂಚದಲ್ಲಿ ಮೂರ್ಖರೂ ಇದ್ದಾರೆ, ಜಾಣರೂ ಇದ್ದಾರೆ. ಅದನ್ನು ಅವರವರ ನಡವಳಿಕೆಯ ಮೇಲಿಂದ ಅರಿಯಬೇಕು. ನಿಜಲಿಂಗಾರಾಧ್ಯ ಲೋಕದ ಜನರ ಗುಣಸ್ವಭಾವಗಳನ್ನು ತೆರೆದ ಕಣ್ಣಿನಿಂದ ನೋಡಿ ಇಲ್ಲಿ ಓದುಗರ ಕಣ್ಣಿಗೆ ಕಟ್ಟುವಂತೆ ಸುಂದರವಾಗಿ ಚಿತ್ರಿಸಿದ್ದಾನೆ.

ಮೂರ್ಖರ ಪದ್ಧತಿ ಹೀಗಿದೆ:

– ಕೊಟ್ಟು ಮನದೊಳಗೆ ಕುದಿವವನು ಮೂರ್ಖ
– ನಿಷ್ಠೆವಂತರ ಹಳಿದು ನಿಂದಿಸುವನತಿ ಮೂರ್ಖ
– ಗುರುಹಿರಿಯರ ವಾಕ್ಯವ ಮೀರುವವ ಮೂರ್ಖ
– ಅಂತರಂಗವ ಕಪಟಮನುಜಗುಸುರುವವ ಮೂರ್ಖ
– ಸಂತೆಯೊಳು ಶಾಸ್ತ್ರವನು ಹೇಳುವವ ಕಡುಮೂರ್ಖ

– ತನಗಿಂತ ಬಲ್ಲಿದರೊಳು ಪಂತವ ಕಟ್ಟಿಕೊಂಬವ ಮೂರ್ಖ
– ಮನ್ನಣೆಯ ಕೊಡದ ಠಾವಿಗೆ ಹೋಗುವವ ಮೂರ್ಖ
– ತನ್ನೊಳೇನುವನರಿಯದೆ ಉನ್ನತೋನ್ನತ ಪಂಡಿತರ ಹಳಿಯುವವ ಮೂರ್ಖ
– ಜನನಿ ಜನಕರ ಬೈದು ಬಳಲಿಸುವವ ಬಲುಮೂರ್ಖ
– ಗಾಡಿಕಾರ್ತಿಯರೊಲವನು ನೆರೆನಂಬಿ ನಿಜವೆಂದು ಮರುಳುಗೊಂಡವ ಮೂರ್ಖ
– ಸೃಷ್ಟಿಗೀಶ್ವರ ನಿಮ್ಮ ಸ್ತುತಿಗಳನು ಜಗದೊಳಗೆ ಬಿಟ್ಟವನು ಬಲುಮೂರ್ಖ

ಜಾಣ ಪದ್ಧತಿ ಹೀಗಿದೆ:

– ಲೋಕದೊಳವರವರ ತೆರದಿ ನಡೆವವ ಜಾಣ
– ಕಾಕು ಮನುಜರನು ಸರಿಗಟ್ಟಿಕೊಳದವ ಜಾಣ
– ಭೂಕಾಂತರಾಸ್ಥಾನದಿ ಜೋಕೆಯಿಂದೇಕಚಿತ್ತದಿ ನಡೆವವ ಜಾಣ
– ಮಂದಮತಿ ನಿಂದಿಸಲು ತಾಳಿಕೊಂಡವ ಜಾಣ
– ಒಂದೆ ಮನದಲಿ ಧ್ಯಾನವ ಮಾಡುವವ ಜಾಣ
– ಬಂದ ಬಲುಚಿಂತೆಯೊಳು ಧೈರ್ಯವಿಡಿದವ ಜಾಣ
– ಸತಿಯಳಿಗೆ ಸಲುಗೆಯನು ಕೊಡದವನು ಕಡುಜಾಣ
– ಚತುರನುಡಿ ಬಾರದಿರೆ ಸುಮ್ಮನಿರುವವ ಜಾಣ
– ಯೋಗ್ಯವಲ್ಲದ ನುಡಿಗಳ ಶ್ರುತಿಗೊಟ್ಟು ಕೇಳದವ ಜಾಣ
– ಕ್ಷುಧೆಯಿಲ್ಲದಾರೋಗಣೆಯ ಮಾಡದವ ಜಾಣ
– ಮೃದುನುಡಿಯನಾಡುತಹುದೆನಿಸಿಕೊಂಬವ ಜಾಣ
– ತನುಜರೊಳು ಕೋಪವನು ಹಿಡಿಯದವ ಜಾಣ
– ಮನೆಯ ಕದನವನು ಪರರೊಳು ಪೇಳದವ ಜಾಣ
– ಧನವಿರಲು ಧರ್ಮವನು ಗಳಿಸಿಕೊಂಬವ ಜಾಣ
– ದುರ್ಜನರು ಹಳಿವುತಿರಲು ಮನದೊಳಗೆ ಹಿಡಿದವ್ರತಗಳ ಬಿಡದವ ಜಾಣ
– ಇಂದುಶೇಖರ ನಿಮ್ಮ ಪೂಜಿಪನು ಕಡುಜಾಣ

ಹೀಗೆಯೇ ಲೋಕನೀತಿಯನ್ನು ಬೋಧಿಸುವ ನುಡಿಗಳು ಶತಕದ ತುಂಬೆಲ್ಲ ಮಾಲೆಗಟ್ಟಿ ನಿಂತಿವೆ. ಕವಿಯ ಲೋಕಾನುಭವ, ಸಾಮಾಜಿಕ ಕಳಕಳಿ, ಬದುಕಿನ ಸಾರ್ಥಕತೆಯ ಹಂಬಲ, ಲೌಕಿಕದಿಂದ ಪಾರಮಾರ್ಥಿಕತೆಯ ಎಡೆಗೆ ಸಾಗಬೇಕೆಂಬ ಉತ್ಕಟೇಚ್ಛೆ, ಲೋಕಕಲ್ಯಾಣದ ಅಭೀಪ್ಸೆ–ಪ್ರತಿಯೊಂದು ನುಡಿಯಲ್ಲಿಯೂ

ತುಂಬಿಕೊಂಡು ಮಾನವನ ಸುಂದರ ಸುಸಂಸ್ಕೃತ ಬದುಕಿಗೆ ದಾರಿದೀಪವಾಗಿವೆ. ಅಂಥ ಇನ್ನೂ ಕೆಲವು ನೀತಿಮುಕ್ತಕಗಳನ್ನು ಇಲ್ಲಿ ಹೀಗೆ ರಾಶಿಗೊಳಿಸಬಹುದು:

- ಕಾಪುರುಷರಿಗೆ ಸುಜನರಿಂಗಿತದ ತಿಳಿಯುಂಟೆ?
- ಕೋಪಿಗಳ ಮನದೊಳಗೆ ಕರುಣಗುಣವಿರಲುಂಟೆ?
- ಪಾಪಿ ಮನುಜರಿಗೆಲ್ಲ ಧರ್ಮ ವಾಸನೆಯುಂಟೆ?
- ನಿಂದಕಗೆ ನೀತಿಯುಂಟೆ? ಬಲ್ಲರ್ಗೆ ಭಯಯುಂಟೆ?
- ಖೂಳರಿಗೆ ಸತ್ಯವುಂಟೆ?
- ಧುರಧೀರನಾದವಗೆ ಮರಣದಂಜಿಕೆಯುಂಟೆ?
- ವರಜಿತೇಂದ್ರಿಗೆ ಚದುರೆಯರ ಹಂಬಲಿರಲುಂಟೆ?
- ಮೆರೆವ ತ್ಯಾಗಿಗೆ ಹಣದ ಪರವೆಯೆಂಬುದುಂಟೆ?
- ಪರಮ ಸುಜ್ಞಾನಿಗಳಿಗತಿ ಗರ್ವವಿರಲುಂಟೆ?
- ಧೃಡವಿಲ್ಲದ ಭಜನೆ ಸಿದ್ಧಿಯಾಗುದುಂಟೆ?
- ಕಡುಮಂದಮತಿಗೆ ಪೇಳಲು ಜ್ಞಾನಬರಲುಂಟೆ?
- ನಡತೆಹೀನನ ಹೃದಯದೊಳು ಭಕ್ತಿಗುಣವುಂಟೆ?
- ಬಡಮನದವಂಗೆ ಔದಾರ್ಯಬುದ್ಧಿಗಳುಂಟೆ
- ಪಡೆದುದಲ್ಲದೆ ಹೆಚ್ಚು ಬರಲುಂಟೆ?
- ಸಂಗೀತ ಸವಿಯು ಬಧಿರಂಗೆ ತೋರುವುದುಂಟೆ?
- ಕಂಗುರುಡನಿಗೆ ಕನ್ನಡಿಯ  ಹಂಬಲುಂಟೆ?
- ಮರಣಕಾಲಕೆ ಪಿರಿದು ಅರಸುತನ ಬರಲೇನು?
- ಪರಮರೋಗದೊಳು ಘೃತಪರಮಾನ್ನಬರಲೇನು?
- ಹರಿಣಾಕ್ಷಿ ವೃದ್ಧನಾಗಿರುವಾಗ ಬರಲೇನು?
- ಧರಣಿಯೊಳು ಬೆಳೆದ ಫಲವು ಉರಿದುಹಾರಿದ ಬಳಿಕ
  ಭರದಿ ಮಳೆ ಬರಲೇನು?
- ಪತಿಯ ನಿಂದಿಸುತಿಪ್ಪ ಸತಿಯಿದ್ದು ಫಲವೇನು?
- ಅತಿಮಂದಮತಿಯಾದ ಸುತನಿದ್ದು ಫಲವೇನು?
- ಚೋರ ನಿಂದಿಸಲಾಗಿ ಚಂದಿರಗೆ ಕುಂದೇನು?
- ಬಲು ಲೋಭಿಗಳ ಬಳಿಯೆ ಧನವಿದ್ದು ಫಲವೇನು?
- ಕಲಿಯಿಲ್ಲದವಗೆ ಚಂದ್ರಾಯುಧವು ಇದ್ದೇನು?
- ಲಲಿತ ವೀಣೆಯ ಧ್ವನಿಯು ಕೋಣಂಗೆ ತಿಳಿಯುಂಟೆ?

– ಅರಗಿಳಿಗಳಂತೆ ಮರಕುಟಿಕ ಮಾತನಾಡುವುದೆ?
– ವರ ಕೋಕಿಲನ ತೆರದಿ ಕಾಕ ಧ್ವನಿದೋರುವುದೆ?
– ಕುರಿಗಳಿಗೆ ಕಬ್ಬಿನೊಳಿಹ ರಸವು ಬರಲುಂಟೆ?
– ಶಿಲೆಯ ಮೇಲರವಿಂದವುದ್ಭವಿಸಿ ತೋರುವುದೆ?
– ಜಲವ ಮರ್ದಿಸಲು ನವನೀತ ಪೊಣ್ಮುವುದೆ?

"ಆವ ಮನೆಯೊಳಗಿಪ್ಪ ದೀವಿಗೆಯ ಬೆಳಗೊಂದೆ
ಆವ ಹಸುವನು ಕರೆಯೇ ಕ್ಷೀರರುಚಿ ಕರವೊಂದೆ
ಆವ ಕೃಷಿಯೊಳು ಬೆಳೆದ ತಿಲದೊಳಗೆ ಬಪ್ಪ ತೈಲವ ನೋಡೆ ಗುಣಮದೊಂದೆ
ಆವ ಕುಲದೊಳಗಿರಲು ಆವ ನಾಮದೊಳಿರಲು
ಆವ ರೂಪಾಗಿರಲು ಒಳಗಿರುವ ಸ್ವಯಂ ಜ್ಯೋತಿ
ದೇವ ನೀನಹುದಹುದು ನಿಜಲಿಂಗ ಭವಭಂಗ ಶರಣಜನ ವರದ ಜಯತು"

" ಮಾರುತನು ನಡೆತಂದ ಸಮಯದಲಿ ಧಾನ್ಯವನು ತೂರಿಕೊಳಬೇಕು;
ಶರೀರದೊಳು ಪ್ರಾಣನಾಯಕನಿದ್ದ ಸಮಯದಲಿ ಶಿವ ನಿಮ್ಮ ಹಾಡಿಹೊಗಳಿ
ಭೂರಿ ಪಾಪವನೆಲ್ಲ ಈಡಾಡಬೇಕು"

ನಿಜಲಿಂಗಾರಾಧ್ಯ ಹೇಗೆ ನೈತಿಕನೋ ಹಾಗೆ ರಸಿಕನೂ ಆಗಿದ್ದಾನೆ. ತನ್ನ ಕಾವ್ಯ ನೀತಿಬೋಧೆಯ ಜೊತೆಗೆ ಲೋಕರಂಜನೆಯನ್ನೂ ಉಂಟು ಮಾಡಬೇಕೆಂಬುದು ಆತನ ಬಯಕೆ. ಕಾವ್ಯದ ಗುರಿ ತಕ್ಷಣ ಆನಂದವನ್ನು ನೀಡುವುದೂ, ಕಾಂತೆಯಂತೆ ಉಪದೇಶ ಮಾಡುವುದೂ ಆಗಿರಬೇಕೆಂಬುದು ಆತನ ಆಸೆ. ಹೀಗಾಗಿ ಎರಡನ್ನೂ ಇಲ್ಲಿ ಸಾಧಿಸಲು ಪ್ರಯತ್ನಿಸಿ ಯಶಸ್ವಿಯಾಗಿದ್ದಾನೆ. ಆತನ ರಸಿಕತೆಗೆ, ಶೃಂಗಾರರಸ ಪ್ರತಿಪಾದನೆಗೆ ಈ ಕೆಳಗಿನ ಉದಾಹರಣೆ ಸಾಕ್ಷಿಯಾಗಿವೆ:

ಕಡುಚೆಲುವೆ ಪಾರ್ವತಿಯ ತೊಡೆಯಡಿಯೊಳಿಂಬಿಟ್ಟು
ನಿಡುಗುರುಳ ನೇವರಿಸಿ ಕುಡಿಹುರ್ಬುಗಳ ತೀಡಿ
ಇಡಿಕಿರಿದ ನುಣ್ಗಲ್ಲವಿಡಿದು ಗುಣ್ಪಿಡುತ ಪೊಂಗೊಡಮೊಲೆಯೊಳುಗುರನಿಡುತ
ಮುಡಿಸಿ ಪೂಸರಸಗಳನು ಮುಡಿವಿಡಿದು ಚೆಂದುಟಿಯ
ಬಿಡದೆ ಚುಂಬನಗೈವುತಡಿಗಡಿಗೆ ಹಾಯೆನುತ
ಬೆಡಗಿನಿಂದೊಡವೆರೆದ ನಿಜಲಿಂಗ ಭವಭಂಗ ಶರಣಜನವರದ ಜಯತು.

ಗಳ ರವದಿ ಚುಂಬನಂಗಳ ರವದಿಯಂಗುಲಂ
ರಳ ರವದಿ ಕಂಕಣಂಗಳ ರವದಿ ಕಾಲ್ಗೆಜ್ಜೆ
ಗಳ ರವದಿ ತಾಡನಂಗಳ ರವದಿ ಹಾರ ಹೀರಾವಳಿಯ ರವದಿಂದಲಿ
ಹೊಳೆ ಹೊಳೆವ ಶಕುನಿಮಂಚದ ರವದಿ ಜಾಣ್ವಾತು
ಗಳನಾಡುತಿರ್ಪ ರವದಿಂದೆ ಗಿರಿರಾಜಸುತೆ
ಯೊಳು ಸುರತಸವಿಗರೆವ ನಿಜಲಿಂಗ ಭವಭಂಗ ಶರಣಜನವರದ ಜಯತು.

ಅಂಗಜನ ಮುಂಗೈಯ್ಯ ಗಿಣಿಯೆ ಮುತ್ತಿನಮಣಿಯೆ
ತುಂಗಜವ್ವನೆಯೆ ಸದ್ಗುಣಶ್ರೇಣಿಯೆ ಫಣಿವೇಣಿ
ಭೃಂಗಕುಂತಳೆ ಚಂದ್ರಮುಖಿಯೆ ಹರಿಣಾಂಬಕಿಯೆ ಶೃಂಗಾರಿ ಹೊಂತಕಾರಿ
ಪೊಂಗಳಸಕುಚದ ಮೋಹನ್ನೆ ಮಾನಿನಿ ರನ್ನೆ
ಇಂಗಿತವ ಬಲ್ಲ ವೈಯಾರಿ ಮನಹಾರಿಯೆನು
ತಂಗನೆಯ ತಕ್ಕೈಪ ನಿಜಲಿಂಗ ಭವಭಂಗ ಶರಣಜನವರದ ಜಯತು.

ಇದು ಶಿವ–ಪಾರ್ವತಿಯರ ಸರಸ ಸಲ್ಲಾಪದ ಸುಂದರ ಚಿತ್ರಣ.

ಹೀಗೆ ನಿಜಲಿಂಗಶತಕ ಭಕ್ತಿ ಮತ್ತು ಶೃಂಗಾರ ರಸಗಳನ್ನು ಸಮರಸಗೊಳಿಸಿಕೊಂಡು ಓದುಗರ ಮನ–ಹೃದಯಗಳನ್ನು ಸೂರೆಗೊಳ್ಳುತ್ತಬಂದಿದೆ. ಕವಿಯು ಪಂಡಿತ–ಲೋಕಾನುಭವಿ–ಭಕ್ತ–ರಸಿಕ–ನೀತಿಜ್ಞ ಎಲ್ಲವೂ ಆಗಿ ತನ್ನ ಈ ಸಮಷ್ಟಿ ವ್ಯಕ್ತಿತ್ವದ ಸಾರವನ್ನು ಈ ಶತಕದಲ್ಲಿ ಧಾರೆಯೆರೆದಿದ್ದಾನೆ. ಕೆಲವು ಪದ್ಯಗಳಲ್ಲಿ ಪಾಂಡಿತ್ಯ ಪ್ರದರ್ಶನ ಕಂಡುಬಂದರೆ, ಹೆಚ್ಚಿನ ಪದ್ಯಗಳಲಿ ಸರಳ–ಸರಸ–ಸಜ್ಜನಿಕೆ ತೋರುತ್ತದೆ. ಹೀಗಾಗಿ ಈ ಕೃತಿ ಪಂಡಿತ ಮತ್ತು ಪಾಮರ ಇಬ್ಬರಿಗೂ ಮಾನ್ಯವಾಗಿ ಹೆಚ್ಚು ಜನಪ್ರಿಯತೆಯನ್ನು ಗಳಿಸಿದೆ.

**ಪರಿಷ್ಕರಣೆ:**

ಈ ಸಂಪುಟದಲ್ಲಿ ಅಳವಡಿಸಿದ ಶತಕಗಳನ್ನು ಈ ಹಿಂದೆ ಪ್ರಕಟವಾದ ಮುದ್ರಿತ ಕೃತಿಗಳು ಮತ್ತು ಹೊಸದಾಗಿ ದೊರೆತ ಹಸ್ತಪ್ರತಿಗಳ ಆಧಾರದಿಂದ ಪರಿಷ್ಕರಿಸಲಾಗಿದೆ. ರಕ್ಷಾಶತಕ–ಪಂಪಾಶತಕಗಳ ಪರಿಷ್ಕರಣಕ್ಕೆ ಪ್ರೊ.ಶಿ. ಶಿ. ಬಸವನಾಳ ಅವರು ಸಂಪಾದಿಸಿ, ಧಾರವಾಡದ ಲಿಂಗಾಯತ ವಿದ್ಯಾಭಿವೃದ್ಧಿಸಂಸ್ಥೆಯ ಮೂಲಕ ಪ್ರಕಟಿಸಿದ 'ಮಹಾಕವಿ ಹಂಪೆಯ ಹರಿಹರದೇವ ವಿರಚಿತ ರಕ್ಷಾಶತಕ ಮತ್ತು ಪಂಪಾಶತಕ' ಎಂಬ ಮುದ್ರಿತ ಕೃತಿಯ–೧೯೬೯ರಲ್ಲಿ ಪ್ರಕಟವಾದ–ಮೂರನೆಯ ಆವೃತ್ತಿಯನ್ನು ಮತ್ತು ಕರ್ನಾಟಕ ವಿಶ್ವವಿದ್ಯಾಲಯ ಕನ್ನಡ ಅಧ್ಯಯನಪೀಠದ

ಹಸ್ತಪ್ರತಿ ಭಾಂಡಾರದ ತಾಳೆಗರಿ ಪ್ರತಿ ಸಂಖ್ಯೆ ೮೫೨(ರಕ್ಷಾಶತಕ) ಮತ್ತು ೮೨೧ (ಪಂಪಾಶತಕ)ನ್ನು ಆಕರವಾಗಿ ಬಳಸಿಕೊಳ್ಳಲಾಗಿದೆ. ಹಸ್ತಪ್ರತಿಗೆ 'ಅ' ಎಂದು, ಮುದ್ರಿತ ಪ್ರತಿಗೆ 'ಆ' ಎಂದು ಸಂಕೇತ ಕೊಡಲಾಗಿದೆ. ಎರಡೂ ಪ್ರತಿಗಳಲ್ಲಿ ಶುದ್ಧಪಾಠವನ್ನು ಸ್ವೀಕರಿಸಿ, ಭಿನ್ನ ಪಾಠವನ್ನು ಅಡಿಯಲ್ಲಿ ಕೊಡಲಾಗಿದೆ.

ಸೋಮೇಶ್ವರಶತಕ ಮತ್ತು ನಿಜಲಿಂಗಶತಕಗಳ ಪರಿಷ್ಕರಣಕ್ಕೆ ಡಾ. ಎಂ. ಎಸ್. ಸುಂಕಾಪುರ ಅವರು ಸಂಪಾದಿಸಿ, ಧಾರವಾಡದ ಶೋಭಾಗ್ರಂಥಮಾಲೆಯಿಂದ ೧೯೬೯ರಲ್ಲಿ ಪ್ರಕಟಿಸಿದ 'ನಿಜಲಿಂಗಶತಕ ಮತ್ತು ಸೋಮೇಶ್ವರಶತಕ' ಎಂಬ ಮುದ್ರಿತ ಪ್ರತಿ ಮತ್ತು ಕರ್ನಾಟಕ ವಿಶ್ವವಿದ್ಯಾಲಯ ಕನ್ನಡ ಅಧ್ಯಯನಪೀಠದ ಕಾಗದ ಪ್ರತಿ-೭೪೦(ಸೋಮೇಶ್ವರಶತಕ) ಹಾಗೂ ಕಾಗದಪ್ರತಿ-೯೦೫(ನಿಜಲಿಂಗಶತಕ)ಗಳನ್ನು ಬಳಸಿಕೊಳ್ಳಲಾಗಿದೆ. ಮೇಲಿನಂತೆ ಇಲ್ಲಿಯೂ ಹಸ್ತಪ್ರತಿಗೆ 'ಅ' ಎಂದು, ಮುದ್ರಿತಪ್ರತಿಗೆ 'ಆ' ಎಂದು ಸಂಕೇತ ಕೊಡಲಾಗಿದೆ. ಎರಡೂ ಪ್ರತಿಗಳಲ್ಲಿ ಶುದ್ಧಪಾಠವನ್ನು ಸ್ವೀಕರಿಸಿ, ಭಿನ್ನಪಾಠವನ್ನು ಅಡಿಯಲ್ಲಿ ಕೊಡಲಾಗಿದೆ. ಅನುಬಂಧದಲ್ಲಿ ಸೇರಿಸಿದ 'ನಿಜಲಿಂಗಶತಕದ ಕಠಿಣ ಪದಗಳ ಭಾವಾನುವಾದ' ಮತ್ತು 'ಕೆಲವು ಸಂದರ್ಭ ಕಥೆಗಳು' ಭಾಗಗಳನ್ನು ಡಾ. ಎಂ. ಎಸ್. ಸುಂಕಾಪುರ ಅವರ ಕೃತಿಯಿಂದ ತೆಗೆದುಕೊಳ್ಳಲಾಗಿದೆ.

## ಕೃತಜ್ಞತೆಗಳು

'ಕನ್ನಡದ ಮೇರು ಕೃತಿಗಳ ಮರುಮುದ್ರಣ-ಪ್ರಕಟಣಯೋಜನೆ'ಯ ಅಡಿಯಲ್ಲಿ ಈ ಶತಕ ಸಂಪುಟವನ್ನು ಸಿದ್ಧಪಡಿಸಿಕೊಡಲು ನನಗೆ ಅವಕಾಶ ನೀಡಿದ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರಾದ ಶ್ರೀ ಮನು ಬಳಿಗಾರ ಅವರಿಗೆ, ಜಂಟಿ ನಿರ್ದೇಶಕರಾದ ಶ್ರೀ ಎಚ್. ಶಂಕರಪ್ಪನವರಿಗೆ, ಪ್ರಕಟಣಶಾಖೆಯ ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಅವರಿಗೆ ಈ ಯೋಜನೆಯ ಆಯ್ಕೆ ಸಮಿತಿ ಅಧ್ಯಕ್ಷರಾದ ಡಾ. ಎಲ್. ಎಸ್. ಶೇಷಗಿರಿ ರಾವ್ ಅವರಿಗೆ ಅನಂತ ವಂದನೆಗಳು.

ಹಸ್ತಪ್ರತಿಗಳನ್ನು ಬಳಸಿಕೊಳ್ಳಲು ಅನುಮತಿ ನೀಡಿದ ಕನ್ನಡ ಅಧ್ಯಯನಪೀಠದ ಅಧ್ಯಕ್ಷರಾದ ಡಾ. ಕೆ.ಆರ್.ದುರ್ಗಾದಾಸ ಅವರಿಗೆ, ಪರಿಷ್ಕರಣ ಕಾರ್ಯದಲ್ಲಿ ವಿಶೇಷವಾಗಿ ನೆರವಾದ ಸಹಾಯಕ ಸಂಶೋಧಕ ಡಾ. ಈರಣ್ಣ ಹುರಳಿ ಅವರಿಗೆ, ತ್ವರಿತವಾಗಿ-ಅಷ್ಟೇ ಅಚ್ಚುಕಟ್ಟಾಗಿ ಅಕ್ಷರ ಸಂಯೋಜನೆ ಮಾಡಿಕೊಟ್ಟ ಡಾ. ಸರಸ್ವತಿದೇವಿ ಭಗವತಿ ಮತ್ತು ಡಾ. ಹನುಮಂತ ಮೇಲಿನಮನಿ ಅವರಿಗೆ, ಈ ಸಂಪುಟವನ್ನು ಆದರದಿಂದ ಬರಮಾಡಿಕೊಳ್ಳುತ್ತಿರುವ ಕನ್ನಡ ಸಾರಸ್ವತಲೋಕಕ್ಕೆ ಅನಂತ ಕೃತಜ್ಞತೆಗಳು.

೧೫-೦೨-೨೦೧೧ **– ವೀರಣ್ಣ ರಾಜೂರ**

# ಪರಿವಿಡಿ

# ರಕ್ಷಾಶತಕ

ಶ್ರೀಮದ್ ಗಂಗಾತರಂಗಾವೃತ ವಿಮಲಜಟಾಜೂಟ ಸರ್ವೇಶ ಗೌರೀ
ವಾಮಾಂಗಾಲಿಂಗನಾಲಿಂಗಿತ ಘನಮಹಿಮೋದಾರಚಾರಿತ್ರ ಚಂಚತ್
ಸೋಮಾರ್ಧೋತ್ತಂಸ ಸಂಸಾರಜಲಧಿವಡಬಾಕಾರ ಸಾಕಾರ ಭಕ್ತಿ
ಪ್ರೇಮಾಂಭೋರಾಶಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೧ ॥

ತಿರುಗುತ್ತೆಂಬತ್ತುನಾಲ್ಕುಂ ದಶಶತಶತಜನ್ಮಂಗಳೊಳ್ ಪುಟ್ಟಿ ನಿಮ್ಮೊಂ-
ದಿರವಂತಿಂತುಟೆಂದೇನುಮನಱಿಯದೆ ಮಣ್ಣಾಗಿ ಕಲ್ಲಾಗುತುಂ ದು-
ರ್ಧರಗುಲ್ಮಂ ಭೂರಿಭೂಜಂ ಪುಳು ಖಗ-ಮೃಗವಾಗುತ್ತುಮೆಂತಕ್ಕೆ ಬಂದೆಂ
ನರಜನ್ಮಕ್ಕಯ್ಯ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೨ ॥

ಬಸಿಱೊಳ್ ಮಾಸೊತ್ತಿ ನೆತ್ತರ್ ಪಸರಿಸಿ ಕರುಳಿಂ ಸುತ್ತಿ ಮೂತ್ರಂ ಪುರೀಷಂ
ಮುಸುಕಿಟ್ಟೆಲ್ಲಂಗದೊಳ್ ಕೆತ್ತಿರಲುದರಶಿಖಿಜ್ವಾಲೆಯಿಂದತ್ತಮಿತ್ತಂ
ಕುಸಿಯುತ್ತುಂ ಪುಟ್ಟುವೊಂದುಜ್ಜುಗದೊಳೆ ಮರಣಾವಸ್ಥೆಯಂ ತಾಳ್ದಿ ಬಂದಾ-
ಯಸ[1]ಮಂ[1] ಚಿತ್ತಯ್ಸಿ[2] ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೩ ॥

ಏನೆಂಬೆಂ ಬಾಲ್ಯದೊಳ್ ಮೇಲಱಿಯದೆ ಮಲದಿಂ ಮೂತ್ರದಿಂ ಶ್ಲೇಷ್ಮದಿಂ ತೋ
ಯ್ದಾನಾರೆಂದೇನುಮಂ ಭಾವಿಸದೆ ಬಧಿರನಂತಂಧನಂತಿರ್ದು ಮತ್ತಂ
ನಾನಾ ಭೋಜ್ಯಕ್ಕೆ ಪಕ್ಕಾಗುತೆ ಚರಿಸಿದೆನಿನ್ನಾಱೆನಿನ್ನಾಱೆನಯ್ಯೋ
ಆನಂದಾಂಭೋಧಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೪ ॥

ಪಿರಿದೊಂದಜ್ಞಾನದಿಂ ಯೌವನವಿಕಳತೆ ಮೈದೋಱೆ ಕಾಂತಾನಿವಾಸಾಂ-
ತರದೊಳ್ ಶ್ವಾನಂಗೆ ಹೀ ಹಂದಿಗೆ ಕಪಿಗೆಣೆಯಾಗಿರ್ದು ಬೇಳಾಗುತುಂ ತತ್

---

೧-೧ಕ್ಕಂ(ಆ)೨ ಯ್ಸು(ಆ)

ಕರಣಕ್ಕಾಳಾಗಿ ಹಾಳಾಗುತೆ ಬಱುದೊಱೆವೋದೆಂ ಬಳಲ್ದೆಂ ಬಿಗುರ್ತೆಂ
ಮರುಳಾದೆಂ ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೫ ॥

ಸ್ತ್ರೀಮಾತ್ರಂ ನೇತ್ರದತ್ತಲ್ ಸುಳಿದೊಡೆ ಮನವಿರ್ಭಾಗಮಾಗುತ್ತೆ ತಾಪ[1]–
ಸ್ತೋಮಂ ಕೈಮೀಱೆ ಲಜ್ಜಾರಸಮುಡುಗಿ ವಿವೇಕಂ ಕಳಲ್ದೋಡಿ ರಾಗಂ
ಕೈಮಿಕ್ಕಾನಾವನೇನೆಂದಱಿಯದ ತೆಱನಂ ಮಾಡುತಿರ್ದಪ್ಪುದಿಂತೀ
ಕಾಮಂ ಕಾಮಾರಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದನ್ನಂ ॥ ೬ ॥

ಏಪೊಳ್ತುಂ ಗಾತ್ರಮಂ ಶೋಷಿಸುತೆ ಕರಣಮಂ ಕಂದಿಸುತ್ತುಂ ನಿರರ್ಥಂ
ತಾಪವ್ರಾತಕ್ಕೆ ಪಕ್ಕಾಗಿಸುತಮಳಗುಣಸ್ತೋಮಮಂ ಖಂಡಿಸುತ್ತುಂ
ಪಾಪಪ್ರಾರಂಭಕರ್ತೃತ್ವಮನೆನಗೆನಿಸಂ ಮಾಡುತಿರ್ದಪ್ಪುದಿಂತೀ
ಕೋಪಂ ಶಾಂತಾತ್ಮ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೭ ॥

ಧನಮಂ ಸ್ತ್ರೀ ಪುತ್ರರಂ ಕೆಮ್ಮನೆ ಕಿಡುವ ಗೃಹ ಕ್ಷೇತ್ರಮಂ ಮಿತ್ರರಂ ವ–
ಸ್ತ್ರನಿಕಾಯಾಕಲ್ಪಮಂ ಮುಂತೆನಗೆನುತೆ ಕರಂ ಕಾಂಕ್ಷೆಯಿಂ ಕೂರ್ಮೆಯಿಂದೆ–
ಳ್ತನಿತುಂ ಪುಣ್ಯಕ್ಕೆ ಮಾಡಲ್ ಕುಡದೆ ಕಿಡಿಸುವೀ ಲೋಭಮಂ ದಾನಿ ನೀಂ ಭೇ–
ದನೆಯಂ ಮಾಡುತ್ತೇ ಪಂಪಾಪುರದರಸ ವಿರೂಪಾಕ್ಷ ರಕ್ಕಿಪ್ಪುದೆನ್ನಂ ॥ ೮ ॥

ದೇಹೋಹಂ ಎಂದು ಮಕ್ಕ[2]ಳ್ ಮನೆ[2] ಧನವಳಿಯಲ್ ಕಂದಿಸುತ್ತುರ್ಬುವಾಶಾ–
ವ್ಯೂಹಕ್ಕಿಂಬಾಗಿಸುತ್ತುಂ ನೆನೆದು ಮಱುಗಿಸುತ್ತುಂ ಮುಸುಂಕಿರ್ದ ಮಿಥ್ಯಾ–
ಸ್ನೇಹಾರಂಭಾನುಕೂಲಂ ನುಡಿಗೆಡೆಗುಡದಿರ್ದಪ್ಪುದೊತ್ತಂಬದಿಂದೀ
ಮೋಹಂ ಮೋಹಾರಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೯ ॥

ಅದನೇನೆಂಬೆಂ ಗುಣವ್ರಾತಮನೆ ಪಱಿಯುತುಂ ವಿದ್ಯೆಯಂ ಖಂಡಿಸುತ್ತುಂ
ಕದಡುತ್ತುಂ ಚಿತ್ತಮಂ ಬುದ್ಧಿಯನುಱದಱೆಯಟ್ಟುತ್ತೆ ಕಾಯ್ದಪ್ಪುದೆನ್ನೀ
ಮದಮಾತಂಗಂ ಮಹಾರೋಹಕ ನಿಜಚರಣಸ್ತಂಭದೊಳ್ ಕಟ್ಟಿ ಸೈತಿ–
ಟ್ಟು ದಯಾಂಭೋರಾಶಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೧೦ ॥

---

೧ ಪಂ(ಅ), ೨–೨ ಳೆನೆ (ಅ)

ಪರರೈಶ್ವರ್ಯಕ್ಕಸೂಯಂಗೊಳುತೆ ಪರರ ಬಲ್ಪಿಂಗೆ ಸಂತಾಪಿಸುತ್ತುಂ
ಪರರಿಂದಂ ಮಿಕ್ಕು ಬಾಳಲ್ ಬಯಸಿ ಕುದಿದು ಬೇಳಾಗಿ ಬೆಂಬೀಳುತಿರ್ದುಂ
ಪರಚಿಂತಾಕ್ಷೋಭೆಯಿಂ ಮತ್ಸರದೊಡನೆ ಕರಂ ಗಾಸಿಯಾದಪ್ಪೆನೀ ಮ–
ತ್ಸರಮಂ ತರ್ಗೊತ್ತಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೧೧ ॥

ಮನವೆನ್ನಂ ದುರ್ವಿಕಾರಕ್ಕೆಳೆದಪುದು ಮನಂ ಮಾನಮಂ ನುರ್ಗಿದತ್ತೀ
ಮನವಾಶಾವಹ್ನಿಯೊಳ್ ನೂಂಕಿದಪುದು ಮನವೀ ಮಾಯೆಯಂ ಬಿಟ್ಟು ನಿಮ್ಮಂ
ನೆನೆಯಲ್ ತಾನೀಯದಯ್ಯೋ ಶಿವನೆ ಭವನೆ ಕಾರುಣ್ಯವಾರಾಶಿಯೆನ್ನೀ
ಮನಮಂ ಸಯ್ತಿಟ್ಟು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೧೨ ॥

ಪ್ರತ್ಯಕ್ಷಂ ಸತ್ತು ಹೋಗುತ್ತಿದೆ ನರನಿಕರಂ [1]ತಾನಿದಂ[1] ಕಂಡು ಕಂಡುಂ
ನಿತ್ಯತ್ವಂಬೆತ್ತ ಪಾಂಗಿಂ ಪಳಿವ ಮುಳಿವ ಕಾಮಿಪ್ಪ ಕೋಪಿಪ್ಪ ಲೋಭಿ–
ಪ್ಪತ್ಯಂತಂ ಗರ್ವಿಪೆನ್ನೀ ಮನಕೆ ಪರಮ ವೈರಾಗ್ಯಮಂ ಕೊಟ್ಟು ಸತ್ಯಂ
ಸತ್ಯಂ ಸತ್ಯಾತ್ಮ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೧೩ ॥

ಇನಿತುಂ ವೈರಾಗ್ಯದತ್ತಲ್ ನೆನೆಯದೆ ಮದದತ್ತಲ್ ಮಹಾಮೋಹದತ್ತಲ್
ಧನದತ್ತಲ್ ಧಾನ್ಯದತ್ತಲ್ ಸತಿಸುತಪಿತರತ್ತಲ್ ಸದಾ ಲೋಭದತ್ತಲ್
ನೆನೆಯುತ್ತಿರ್ದಪ್ಪುದೆನ್ನೀ ಮನವಿದನೆಡೆಗೊಂಡಳ್ಕಜೆಿಂ ದೇವ ನೀವಿಂ–
ತೆನಿತುಂ ತೀವಿರ್ದು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೧೪ ॥

ಸುವಿಚಾರಕ್ಕೊರ್ಮೆಯುಂ [2]ಸೇರದು[2] ನಡೆಯಿಪುದತ್ಯಾಗ್ರಹವ್ಯಾಪ್ತಿಯಿಂ ತಾ–
ನವಿಚಾರಕ್ಕೆಂದೊಡೆಂಟಂ ನಿಮಿರ್ವುದು ಬಯಲಂ ಭಾವಿಸುತ್ತಿರ್ಪುದಾತ್ಮೋ–
ದ್ಭವಮೂಲಚ್ಛೇದನೋಪಾಯವನೆಣಿಸದು ಮದ್‌ಬುದ್ಧಿಯೀ ಬುದ್ಧಿಯಂ ಶಂ–
ಭುವೆ ಸಂತಂ ಮಾಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೧೫ ॥

ಇನಿತುಂ ತಾನಲ್ಲದಾರಂ ಬಗೆಯದು ಮದಮಂ ಗರ್ವಮಂ ಕೂಡಿಕೊಂಡಿ–
ರ್ದೆನಿತುಂ ಮುಂಗಾಣದತ್ಯುದ್ಧತತರಮುಖವಾಗಿರ್ಪುದೋರಂತೆ ವಿದ್ವ–

೧–೧ x(ಅ), ೨–೨ ರದ(ಆ)

ಜ್ಞನಮಂ ಕೈಕೊಳ್ಳದೆನ್ನೀ ಮನದೊಡತಣಹಂಕಾರವಿಂತಿಂತಿದಂ ದೇ–
ವನೆ ನೀಂ ತರ್ಗೊತ್ತಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೧೬ ॥

ಧನದೊಳ್ ಧಾನ್ಯಂಗಳೊಳ್ ಭೂಷಣವಿತತಿಗಳೊಳ್ ಪುತ್ರ ಸಂತಾನದೊಳ್ ಭೋ–
ಗನಿಕಾಯಭ್ರಾಂತಿಯೊಳ್ ಕಾಂತೆಯರ ತನುಸುಖಚ್ಛಾಯೆಯೊಳ್ ಮಾಯೆಯೊಳ್ ನಿಂ–
ದೆನಸುಂ ನಟ್ಟಿರ್ದ ಮಚ್ಚಿತ್ತಮನಭವ ನಿಜಾಂಘ್ರಿದ್ವಯಧ್ಯಾನಸಾನಂ–
ದನಿವಾಸಂ ಮಾಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೧೭ ॥

ಓರಂತೀ ದೇಹಮಂ ರಕ್ಷಿಸುವತಿಭರದಿಂದುಳ್ಳು [೧]ತೆತ್ತುಂ[೧] ಸತೇಜ
ಕ್ಕಾರೇನಂ ಪೇಳ್ದೊಡಂ ಕೈಮುಗಿದು ಸುಗಿದು ಪೆರ್ಬಿಟ್ಟಿಯಂ ಪೊತ್ತು ಸಂಸಾ–
ರಾರಂಭಂಗೆಯ್ದು ದುಃಖಕ್ಕಲಸಿ ಮಱುಗಿ ನಿಮ್ಮಂಘ್ರಿಯಂ ಪೊರ್ದಿದೆಂ ಸ–
ತ್ಕಾರಂಭಪ್ರೇಮಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೧೮ ॥

ಅವಿಚಾರಂ ಮಿಕ್ಕು ಲಾಭಂಬಡೆವತಿಭರದಿಂ ಸುತ್ತಿ ದೇಶಂಗಳೊಳ್ ವಿಂ–
ಧ್ಯವಿತಾನಪ್ರಾಂತದೊಳ್ ತಿಱ್ರನೆ ತಿರುಗಿ ಮೊದಲ್‌ಗೆಟ್ಟು ಬೆಂಬಿಳ್ದು ದುಃಖ
ವ್ಯವಹಾರಕ್ಕಳ್ಕಿ ನಿಮ್ಮೀ ಚರಣಯುಗಳಮಂ ಪೊರ್ದಿದೆಂ ಭಕ್ತವೃಂದೋ–
ತ್ಸವಕಲ್ಪೋರ್ವೀಜ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೧೯ ॥

ಅವನಿಂತಾರಾದೊಡಂ ಪಲ್ಗಿರಿದು ಪಿರಿದು ಬಾಯಿಂದೆ ದೈನ್ಯಾಕ್ಷರಂ ಸಂ–
ಭವಿಸುತ್ತೆನ್ನಾಳ್ದ ಸಂದೇಶಮನೆ ಕರುಣಿಸೆಂದಲ್ಲಿ ಮರ್ತ್ಯಂಗೆ ಸಾವು–
ತ್ತವೆ ಪುಟ್ಟುತ್ತಿರ್ಪ ಸೇವಾನರಕನದಿಯನೀಸಾಡಿ ಮದ್‌ಭಾಗ್ಯದಿಂ ನಿ–
ನ್ನವನಾದೆಂ ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೨೦ ॥

ತನು[೨]ವಂ[೨] ಸ್ತ್ರೀ ಪುತ್ರರಂ ರಕ್ಷಿಪ ವಿಪುಳತೆ ಕೈಕೊಂಡು ಕಾರ್ಪಣ್ಯ ವಕ್ತ್ರಂ
ತನುಗಾತ್ರಂ ದೀನನೇತ್ರಂ ತುಷಲಘುತರಮಾತ್ರಂ ಕರಂ ಪೊರ್ದಿ ತೋರ್ಪೀ

---

೧–೧ x (ಅ)

ಜನಮಂ ಬೇಳ್ವಾಸೆಯಿಂ ಸಾವಿನ ಪರಿಯೆನಿಪೀ ದೈನ್ಯಮಂ ಬಿಟ್ಟು ನಿಮ್ಮಂ
ನೆನೆಯುತ್ತಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೨೧ ॥

ಮನೆಯೆಂದುಂ ಮಕ್ಕಳೆಂದುಂ ಜನನಿಜನಕರೆಂದುಂ ವೃಥಾ ಪತ್ನಿಯೆಂದುಂ
ಧನಮೆಂದುಂ ಧಾನ್ಯಮೆಂದುಂ ಸಕಲವಿಷಯಚಿಂತೆನ್ನದೆಂದುಂ ನಿರರ್ಥಾ–
ರ್ಥನಿಮಿತ್ತಂ ಬೆಂದು ತಾಪತ್ರಯದೊಳೆ ಕುದಿದೆಂ ಬತ್ತಿದೆಂ ಬಾಡಿದೆಂ ಯಾ–
ತನೆಗೊಂಡೆಂ ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೨೨ ॥

ವಿಪುಳಾನಂಗಾಗ್ನಿಯಿಂ ಬಂದೆಳೆದುರವಣಿಪಾಶಾಗ್ನಿಯಿಂದಂ ನಿರರ್ಥಂ
ಕುಪಿತೋದ್ಭೂತಾಗ್ನಿಯಿಂದಂ ಹರಹರ ಮಿಗೆ ಬೇವುತ್ತುಮಿರ್ದಪ್ಪೆನಾನಂ–
ದಪಯೋವಾರಾಶಿ ನಿಮ್ಮೀ ವಿಮಳಕರತಳಾಬ್ಜಂಗಳಿಂದೆತ್ತುತಯ್ಯೋ
ಕೃಪೆಯಿಂದಂ ನೋಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ॥ ೨೩ ॥

ನವೆದೆಂ ರೋಗಂಗಳಿಂದಂ ಸೆಡೆದೆನನುದಿನಂ ಸೇವೆಯಿಂದಂ ನಿರರ್ಥಂ
ಸವೆದೆಂ ಕಾಮಂಗಳಿಂದಂ ಮಿಗೆ ಪರಿಭವದೊಳ್ ಬಂದೆ ನಾನಾಸೆಯಿಂದಂ
ತವಿಲಾದೆಂ ಕೋಪದಿಂದಳ್ಕಿದೆನತಿಮದದಿಂ ಮುಂದುಗೆಟ್ಟಿರ್ದಪೆಂ ಶಂ–
ಭುವೆ ನೀಲಗ್ರೀವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೨೪ ॥

ಅಯ್ಯೋ ಸಂಸಾರಸಂಗಕ್ಕಱಿಯದೆಱಗಿದೆಂ ಮಳ್ಗಿದೆಂ ಮಾಱುವೋದೆಂ
ಮುಯ್ಯಾಂತೆಂ ಮುಂದುಗೆಟ್ಟೆಂ ಸೆಡೆದೆನುಡುಗಿದೆಂ ಮಾಸಿದೆಂ ಸೂಸಿದೆಂ ಕಿ–
ಗ್ಗ್ವಯ್ಯಾದೆಂ ಕಂದಿದೆಂ ಕುಂದಿದೆನಲಸಿದೆನಾಸತ್ತೆನಲ್ಲಾಡಿದೆಂ ನೀ–
ನಯ್ಯಾ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೨೫ ॥

ಉರಗಾಸ್ಯಾಲಗ್ನಭಗ್ನಪ್ರಚಲಿತಹರಿವೊಲ್ ವ್ಯಾಘ್ರವಕ್ತ್ರಪ್ರಯುಕ್ತ
ಸ್ಫುರಿತಾತಂಕಾಂತರಂಗಸ್ಥಿತಿಮೃಗಶಿಶುವೊಲ್ ಸಿಂಹಹಸ್ತಾವಲಂಬ
ದ್ವಿರದಂಬೋಲಿರ್ದೆನೀ ಮಾಯೆಯ ಮುಖದೆಡೆಯೊಳ್ ಬೇಗದಿಂ
ಪಿಂಗಿಸಾ ಮದ್
ಗುರುವೇ ಮತ್ಸ್ವಾಮಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ॥ ೨೬ ॥

ಲಲನಾಸಂಭೋಗರೋಗಂ ಪಸಿವನುಡುಗಿಸುತ್ತಾರ್ತಿಯಂ ಪೊಂಗಿಸುತ್ತುಂ
ಬಲಮಂ ಕೈಗುಂದಿಸುತ್ತುಂ ಸುಜನವಚನಪಥ್ಯಕ್ಕೆ ತಾಂ ವಕ್ರಿಸುತ್ತುಂ
ಸಲೆ ಲಜ್ಜಾಭಾವಮಂ ಮೀಱಿಸುತುಮಿದೆಯಿದಕ್ಕೌಷಧಂಗೊಟ್ಟು ತಂದೇ
ತಲೆಯೊಳ್ ಕೈಯಿಟ್ಟು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ॥ ೨೭ ॥

ದ್ವಿರದಂ ಮತ್ಸ್ಯಂ ಪತಂಗಂ ಭ್ರಮರನಹಿಯೆನಿಪ್ಪಿಂತಿವೇಕೆಂದ್ರಿಯಾರ್ಥಂ
ತಿರುಗುತ್ತಿರ್ದಪ್ಪುವಿಂತೀ ಜನನದ ಬಳಿಯೊಳ್ ದೇವ ಪಂಚೇಂದ್ರಿಯಾರ್ಥಂ
ವಿರಸಂ ವಿದ್ರೂಪಿ ಮೂರ್ಖಂ ವಿಷಯವಿಕಳನೇನಪ್ಪೆನೆಂತಿರ್ಪೆನಯ್ಯೋ
ಕರುಣೀ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೨೮ ॥

ತರದಿಂ ರೋಗಂ ವಿಷಂ ವೃಶ್ಚಿಕವನಲನಹಿವ್ಯಾಘ್ರಮುಗ್ರಾಯುಧಂಗಳ್
ದುರಿತಂ ಮತ್ತದ್ವಿಪಂ ಮೂರ್ಖತೆ ಪೊಡೆವ ಸಿಡಿಲ್ ದುರ್ಜನಂ ದುರ್ಮದಂ ತ-
ಸ್ಕರರೆಂಬೀ ಕಂಟಕಸ್ತೋಮದ ನಡುವೊಡಲಿರ್ಪಂದಮೇಂ ಸೋಜಿಗಂ ಶಂ-
ಕರ ನೀಂ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ॥ ೨೯ ॥

ಧನಮಂ ಸೈತಾರ್ಜಿಪೆಂ ಬೈತಿಡುವೆನದಱಿೊಳಂ ಪುಣ್ಯವೈವಾಹಮಂ ಮಾ-
ಳ್ಪೆನದಂ ಪುತ್ರರ್ಗಲಂಕಾರಮನೊದವಿಸುವೆಂ ಕೂಡಿಭೋಗಿಪ್ಪೆನೆಂದಾಂ
ನೆನೆಯುತ್ತಿರ್ಪನ್ನೆಗಂ ತೊಟ್ಟನೆ ಮರಣಮದಾಗಲ್ಕೆ ಬೇಳಪ್ಪ ದುಶ್ಚಿಂ-
ತನೆಯಂ ತರ್ಗೊತ್ತಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೩೦ ॥

ಕನಕಂ ನೀರಕ್ಕರಂ ಪೆಂಡಿತಿ ಕನಸು ಸುತರ್ ಮಂಜು ತಾಯ್ತಂದೆ ವಾಯಂ
ತನುವಭ್ರಚ್ಛಾಯೆ ಮಿತ್ರರ್ ಗಗನಕುಸುಮಮಿಷ್ಟರ್ ಮರೀಚೀಜಲಂ ಯೌ-
ವನಧರ್ಮಂ ಮೇಘಚಾಪಂ ಗೃಹವಚಿರವೆನಿಪ್ಪಿಂತಿವಂ ಬಿಟ್ಟು ನಿಮ್ಮಂ
ನೆನೆಯುತ್ತಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೩೧ ॥

ಎರವೀ ದೇಹಂ ಹಿರಣ್ಯಂ ಪುದು ಸತಿ ಪಗೆಯಾತ್ಮೇಷ್ಟರೌಪಾಧಿಕರ್ ಸೋ-
ದರರೆಲ್ಲಂ ವೈರಿಗಳ್ ತಾವೆನಿಪಿದನಱಿದುಂ ಮತ್ತಮಾವರ್ಥದಿಂದಂ
ಪೊರೆವೆಂ ರಕ್ಷಿಪ್ಪೆನೊಲ್ವೆಂ ಬಿಡದೆ ನಡೆಯಿಪೆಂ ನಂಬಿ ನಚ್ಚಿರ್ಪೆನೆನ್ನಿಂ
ಮರುಳಾರಾರಾ?ನೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೩೨ ॥

ಜಲಮಂ ಪೊರ್ದಿರ್ಪ ಶೈವಾಲದ ತೆಱದೆ ಕರಂ ದೀಪಿಕಾಚ್ಛಾಯೆಯೆಂತು–
ಜ್ಜ್ವಲವಾಂತಾ ಚಂದ್ರಲಕ್ಷ್ಮಂ ಮುಕುರದೊಳಗೆ ತೋರ್ಪಾ ಪ್ರತಿಚ್ಛಾಯೆಯೆಂತಂ–
ತಲೆಯುತ್ತುಂ ಪತ್ತಿ ಬೆನ್ನಂ ಬಿಡದಿದೆ ಘನಸಂಸಾರವೀ ಮಾಯೆಯಂ ನಿ–
ರ್ಮಲ ನೀನೇ ತೀರ್ಚೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥೩೩॥

ನೆಳಲೊಳ್ ಪೋರ್ವಂತಿರಾಕಾಶಮನವಯವದಿಂದೀಸುವಂತುರ್ವಿಯಂ ತಾಂ
ತೊಳೆವಂತಭ್ರಾಳಿಯಂ ಕಂಡರಿಸುವ ತೆಱದಿಂ ಧೂಮಮಂ ಸೀಳ್ವ ಪಾಂಗಿಂ
ಬಳಲುತ್ತಿರ್ದಪ್ಪೆನೀ ಮಾಯೆಯ ಮನೆಯ ದುವಾಳಿಂದೆ ನಿರ್ಮಾಯ ನಿತ್ಯೋ–
ಜ್ಜ್ವಳ್[೧] ನಿಸ್ತ್ರೈಗುಣ್ಯ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೩೪ ॥

ಮದದಿಂದಂ ಪೊಳ್ತು ಪೋಗುತ್ತಿದೆ ಶಿವಶಿವ ಮಾತ್ಸರ್ಯದಿಂ ಪೊಳ್ತು ಪೋಗು–
ತ್ತಿದೆ ಆಹಾ ಪೊಳ್ತು ಪೋಗುತ್ತಿದೆ ಮುಸುಕಿದ ತತ್ಕಾಮದಿಂ ಪೊಳ್ತು ಪೋಗು–
ತ್ತಿದೆ ಲೋಭವ್ಯಾಪ್ತಿಯಿಂ ಕೋಪದಿನಜೆಯದೆ ದುರ್ಮೋಹದಿಂ ಪೊಳ್ತುಪೋಗು–
ತ್ತಿದೆ ತಂದೇ ತಂದೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೩೫ ॥

ಎರೆದೇವೆಂ ಪೊರ್ದಿಯೇವೆಂ ನಿರುತದೆ ನೆನದೇವೆಂ ಮನಂ ಮುಟ್ಟಿಯೇವೆಂ
ಕರೆದೇವೆಂ ಕೂರ್ತುಮೇವೆಂ ಬಿಡದತಿಭರದಿಂ ನಂಬಿಯೇವೆಂ ಶಿವಾ ಮದ್
ಗುರುವೆ ಇನ್ನೇವೆನೇವೆಂ ನಿಜಕರುಣವಣಂ ಪೊರ್ದದಸ್ಪೃಶ್ಯನಂ ಶಂ–
ಕರ ನೀಂ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ॥ ೩೬ ॥

ತವೆ ರೋಗಂ ಪತ್ತಿ ಗಾತ್ರಂ ಧರಣಿಗೆ ಕೆಡೆದಿರ್ಪಲ್ಲಿಯುಗ್ರದ್ವಿಪಂ ಬಂ–
ದವಿಚಾರಂ ಕಾಯ್ದು ಬಲ್ಪಿಂದೊದೆಯೆ ಮುದುಡಿ ಬೀಳ್ವಲ್ಲಿ ಕಾಳ್ಕಿಚ್ಚು ಸುತ್ತಂ
ಕವಿತಂದಾ ಪೊಳ್ತು ನಾಲ್ಕುಂ ದೆಸೆಗೆ ಪರಿದು ಬೇವದೆ ನೀವಲ್ಲದಾರ್ ಕಾ–
ವವರಿಂ ಕಾಮಾರಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೩೭ ॥

ಎಡೆಗೊಂಡೀ ಮುಪ್ಪುದೋಱಲ್ ನೆರೆ ನೆಗೆದು ಸಿರಂದೂಗಿ ಬೆನ್ ಬಾಗಿಯೆಂತ–
ಕ್ಕಡಿಯೆತ್ತಲ್ಕಾಱದೆತ್ತಂ ದಡದಡಿಸಿ ಕರಂ ಜೋಲ್ದು ಕೋಲೂಱೆ ನಿಂದುಂ

---

೧+ಚ್ಚಾ (ಅ)

ನಡುಗುತ್ತುಂ ಕೆಮ್ಮಿ ಕೊಮ್ಮುತ್ತೊಡಲನೊಲೆಯುತುಂ ಮುಗ್ಗಿ ಬಳ್ದುಂ ನಿತಾಂತಂ
ಕೆಡೆವಲ್ಲಿಂ ಮುನ್ನ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೩೮ ॥
ತೆಱಪಿಲ್ಲಂ ಸಾವು ಭೋಂಕೆಂದಡಸಿದ ಪದದೊಳ್ ಭಕ್ತಿಸಂಧಾನವೆಲ್ಲಿ–
ತ್ತಱಿವೆಲ್ಲಿತ್ತರ್ಥವೆಲ್ಲಿತ್ತಮಳಗುಣವದೆಲ್ಲಿತ್ತೋ ಸದ್ಧರ್ಮವೆಲ್ಲಿ–
ತ್ತೊಱಪೆಲ್ಲಿತ್ತೋಜೆಯೆಲ್ಲಿತ್ತತುಳಬಲಮದೆಲ್ಲಿತ್ತದಕ್ಕಂಜಿ ನಿಮ್ಮಂ
ಮಱೆವೊಕ್ಕೆಂ ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೩೯ ॥

ಕಿವಿಕಣ್ಗಳ್ ಕೆತ್ತು ಬಾಯೊರ್ಗುಡಿಸಿ ಕರೆಯೆ ಪೆರ್ಗೂರಿಡುತ್ತೆಯೆ ಬಂದಿ–
ರ್ದವರಂಜಲ್ ಶ್ವಾಸಮೇಱುತ್ತಿಳಿಯುತುಮಿರೆಯಂತಲ್ಲಿ ಕೈ ಕಾಲ್ಗಳೊಳ್ ಜೀ–
ವವನಂಟಂಟೆಲ್ಲಿಯುಂ ಕಾಣದೆಯಕಟಕಟಯ್ಯೋ ಗಡಾ ಸತ್ತನೆಂಬೀ
ಪವಣಿಂದಂ ಮುನ್ನ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೪೦ ॥

ದೇವಾ ನಾನೇವೆನೆಂದೆಂದಬಲೆಯಳುತೆ ತಾಂ ಪೋಗೆ ಪಿಂದಂ ಜನಂಗಳ್
ಸಾವೀತಂಗಾಯ್ತೆನುತುಂ ಮಱುಗಿ ಬರೆ ತನುಜಾಳಿಯುಂ ಬಂಧುವರ್ಗಂ
ತಾವೆತ್ತಂ ಮತ್ತೆ ಶೋಕಂ ಮುಸುಕಿ ನಡೆಯೆ ತತ್ಕಷ್ಟದೊಳ್ ಕಾಷ್ಠರೂಪಿ
ಬೇವಲ್ಲಿಂ ಮುನ್ನ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೪೧ ॥

ಜನನೀಗರ್ಭಾಂಡದಿಂ ಬರ್ಪತಿವಿಷಮತರಕ್ಲೇಶಮಂ ಬಾಲ್ಯದೊಳ್ ಮಾ–
ಳ್ಪ ನಿಷೇಧವ್ರಾತಮಂ ಯೌವನವಿಕಳತೆಯಂ ಮುಪ್ಪಿನಾ ಹೇಯಮಂ ಸಾ–
ವನಿರೋಧಸ್ತೋಮಮಂ ಕಂಡಲಸಿದೆನದಿರ್ದೆಂ ಪೇಸಿದೆಂ ನೊಂದೆನೋರಂ
ತನುಗೆಟ್ಟೆಂ ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೪೨ ॥

[1]ಆನೆಂತೆಂತಕ್ಕೆ[1] ಬಂದೆಂ ಮನುಜಭವದೊಳೆಂತಕ್ಕನೂನಾಂಗಸಂಗಂ
ತಾನಾಯ್ತೆಂತಕ್ಕೆ ಕೂಡಿತ್ತಘಟಿತಘಟಿತಂ ಸತ್ಕುಲಂ ಮತ್ತಮೆಂತ–
ಕ್ಕಾ ನಿಮ್ಮಂಘ್ರಿದ್ವಯಕ್ಕಾನೆಱಗಿದೆನಿನಿತಾಯಾಸದಿಂ ಬಂದೆನಯ್ ಸ–
ತ್ಯಾನಂದಜ್ಯೋತಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೪೩ ॥
ಶರಣಾರ್ ನೀಂ ಕಾವರಾರ್ ನೀಂ ಗತಿ–ಮತಿ–ಪತಿಯಾರ್ ನೀಂ
ಕೃಪಾಂಬೋಧಿಯಾರ್ ನೀಂ
ಗುರುವಾರ್ ನೀಂ ಗೋತ್ರವಾರ್ ನೀಂ ಜನನಿ–ಜನಕರಾರ್ ನೀಂ

ಮಹಾಬಂಧುವಾರ್ ನೀಂ
ವರರಾರ್ ನೀಂ ವಂದ್ಯರಾರ್ ನೀನೆನಗತಿಹಿತರಾರ್ ನೀಂ ಮಹಾದೇವ ನಿನ್ನಿಂ
ಪೆರರಾರಾರ್ ನೀನೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೪೪ ॥

ಮರುಳಾರಾಂ ಮತ್ತನಾರಾಂ ಮತಿವಿರಹಿತನಾರಾಂ ಬುಧದ್ವೇಷಿಯಾರಾಂ
ಪರನಾರಾಂ ಕರ್ಮಿಯಾರಾಂ ಖಲಜನಸಖನಾರಾಂ ಸದಾಕ್ರೂರವಾಕ್‌ಪಾ–
ಮರನಾರಾಂ ನೀಚನಾರಾಂ ವಿಷಯವಿಕಳನಾರಾಂ ಮಹಾಕ್ಷುದ್ರರೆನ್ನಿಂ
ಪರರಾರಾರಾನೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೪೫ ॥

ಗುರು ನೀಂ ತ್ವಚ್ಛಿಷ್ಯನಾಂ ನಿರ್ಮಳಘನನಿಧಿ ನೀಂ ಕ್ಷುದ್ರನಾಂ ದಾನಿ ನೀನಾ
ತುರನಾಂ ನಿಷ್ಕಾಮಿ ನೀಂ ಕಾಮದ ನೆಲೆವನೆಯಾಂ ತಂದೆ ನೀಂ ಪುತ್ರನಾಂ
ಶಾಂ–
ತರಸಂ ನೀಂ ಕ್ರೋಧಿಯಾಂ ಪುಣ್ಯದ ಫಲತತಿ ನೀಂ ಪಾಪಿಯಾಂ ಸ್ವಾಮಿ

ನೀಂ ಕಿಂ–
ಕರನಾಂ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೪೬ ॥

ಖಳನಂ ದುರ್ಬೋಧನಂ ದುರ್ವಿಷಯನಿರತನಂ ದುಷ್ಟನಂ ಧೂರ್ತನಂ ದು–
ರ್ಬಳನಂ ದುರ್ಮೋಹಿಯಂ ದುರ್ಜನಜನಹಿತನಂ ಸಜ್ಜನದ್ವೇಷಿಯಂ ಸಂ–
ಚಳನಂ ದೋಷಾರ್ತಿಯಂ ದುರ್ಧರತರವಿರಸಕ್ರೀಡನಂ ಕೋಪಿಯಂ ವ್ಯಾ–
ಕುಳನಂ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೪೭ ॥

ಅಳಿಪಂ ಸನ್ಮಾನಹೀನಂ ಸುಜನಜನವಿದೂರಂ ವೃಥೋತ್ಸಾಹಿ ಮೂರ್ಖಂ
ಖಳನತ್ಯಾಸ್ವಾದಿ ವಿದ್ಯಾವಿನಯನಯವಿಹೀನಂ ಕುಜಾತಿಪ್ರಸಂಗಂ
ಗಳಪಂ ಚಾರ್ವಾಕನಜ್ಞಂ ಗುಣರಹಿತನೆನಿಪ್ಪೆನ್ನನೊಲ್ದೀಶಂ ನೀಂ ವ್ಯಾ–

ಕುಳನಂ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೪೮ ॥
ಸತತಂ ನಿಂದಾಕರಂ ನಿಷ್ಠುರನತಿಕೃಪಣಂ ಸಜ್ಜನದ್ವೇಷಿ ದುಶ್ಚಿಂ–
ತಿತಚಿತ್ತಂ ಜ್ಞಾನದೂರಂ ಪರಹಿತರಹಿತಂ ಭಕ್ತಿವಿಶ್ವಾಸಹೀನಂ
ಸ್ತುತಿಲೋಲಂ ರಾಗಶೀಲಂ ಸುಕೃತವಿಮುಖನಾನಂದಹೀನಂ ವಿಮಾನಂ
ನತಕಲ್ಪೋರ್ವಿಜ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೪೯ ॥

ಅತಿದೀನಂ ಧೂರ್ತಮಾನಂ ಪರಧನವನಿತಾಧೀನನಾನಂದಹೀನಂ
ಮತಿಶೂನ್ಯಂ ಡಂಭಮಾನ್ಯಂ ವಿಷಯವಿಸರದನ್ಯಂ ವಿಮೂಢರ್ಗನನ್ಯಂ
ನುತದೂರಂ ದುಃಖಸಾರಂ ಸುಜನಜನಘನಕ್ರೂರನೀ ಭೂಮಿಭಾರಂ
ಸತತಂ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೫೦ ॥

ಖರರೂಪಂ ಪಾಪದೀಪಂ ಕುಜನಜನಕಲಾಪಂ ಸದಾರಬ್ಧ ಕೋಪಂ
ಸ್ಥಿರಭಂಗಂ ದುಷ್ಪ್ರಸಂಗಂ ವಿಷಯಕುಸುಮಭೃಂಗಂ ದುರಾಶಾಂತರಂಗಂ
ವರಧೂರ್ತಂ ದಂಭಕಾರ್ತಂ ಖಳಜನಸಲಿಲಾವರ್ತನಜ್ಞಾನಗರ್ತಂ
ಕರುಣೀ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೫೧ ॥

ಘನವೆನ್ನೊಳ್ ಮಾಣದೀ ಕಾಮದ ವಿಕಳತೆಯೀ ಕ್ರೋಧವೀ ಲೋಭವೀ ದು–
ರ್ಮನವೀ ದುಶ್ಚಿಂತೆಯೀ ದುರ್ಮದದ ಮಮತೆಯೀ ಮೋಹವೀಯಾಸೆಯೀ
ದು–
ರ್ಜನಸಂಗಪ್ರೇಮವೀ ಮತ್ಸರದ ಮಸಕವೀ ದುಃಖಸಂಸ್ತೋಮಮಂ ಛೇ–
ದನೆಯಂ ಮಾಡುತ್ತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೫೨ ॥

ಸಲೆ ಮಾಯಾಮೋಹವಾಚ್ಛಾದಿಸೆ ನೆಱೆ ಧೃತಿಗೆಟ್ಟೆಂ ವೃಥಾ ಧಾತುಗೆಟ್ಟೆಂ
ಪೊಲಗೆಟ್ಟೆಂ ಮುಂದುಗೆಟ್ಟೆಂ ನೆನೆಯದೆ ಮತಿಗೆಟ್ಟೆಂ ಕರಂ ಬುದ್ಧಿಗೆಟ್ಟೆಂ
ನೆಲೆಗೆಟ್ಟೆಂ ನೀತಿಗೆಟ್ಟೆಂ ಮಱೆದು ಮಿಗೆ ಮನಂಗೆಟ್ಟೆನಾನುರ್ಬುಗೆಟ್ಟೆಂ
ತಲೆಗೆಟ್ಟೆಂ ತಂದೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೫೩ ॥

ನೆನೆವೆಂ ಸ್ವಪ್ನೋಪಮಸ್ಮಾರಕುವಿಷಯದ ಸಂಯೋಗಮಂ ಭೋಗಮಂ ಕೆ–

ಮ್ಮನೆ ನಿಮ್ಮೀ ಭಕ್ತಿಯೊಂದಂ ನೆನೆಯೆನೊಸೆದು ಸತ್ಯತ್ವ–ನಿತ್ಯತ್ವಮಂ ಯಾ–
ತನೆಗೊಂಡರ್ಥಾರ್ಥದಿಂದನ್ಯರನನುದಿನಮೋರಂತೆ ಬೋಧಿಪ್ಪ ದುರ್ಬೋ
ಧನನಯ್ಯೋ ನೋಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ॥ ೫೪ ॥
ಏಕೆನ್ನಂ ನೋಡದಯ್ಯೋ ಭವ ಭವ ಭವದೊಳ್ ತಂದೆ ಚಂದ್ರಾವತಂಸಾ
ಏಕೆನ್ನಂ ಮಾಯೆಯಿಂದಂ ಶಿವ ಶಿವ ಶಿವ ಬೆಳ್ಮಾಡುತಿರ್ದಪ್ಪೆ ಈಶಂ
ಏಕೆನ್ನಂ ಕಾಲನಿಂದಂ ಹರ ಹರ ಹರ ನೀಂ ಕಾಡುತಿರ್ದಪ್ಪೆ ದೇವಾ
ಲೋಕೈಕಾರಾಧ್ಯ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೫೫ ॥

ಭವವೇಕಾನೇಕೆ ಸತ್ತ್ವಾದಿಗುಣದ ಪುದುವಾಳೇಕದಾನೇಕೆ ಕಾಮೋ–
ತ್ಸವವೇಕಾನೇಕೆ ತಾಪತ್ರಿತಯದ ಪೊಡೆಗಿರ್ಚೇಕದಾನೇಕೆ ಕೋಪೋ–
ದ್ಭವವೇಕಾನೇಕೆ ಕರ್ಮದ್ವಯದ ಕಡುದೊಡಂಕೇಕದಾನೇಕೆ ದೇವಾ
ಭವಕರ್ಮಧ್ವಂಸಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೫೬ ॥

ಅದು ಸಂಸಾರಾಬ್ಧಿಯಂ ದಾಂಟಿಸುವುದದು ದುರಾಚಾರ–ದುರ್ಬುದ್ಧಿಯಂ ಕೀ–
ಳ್ವುದು ನಿತ್ಯಂ ಶ್ರೀಗುರುಶ್ರೀಪದಸರಸಿಜಮಂ ತೋರ್ಪುದಾಹಾ ಬಳಿಕ್ಕಂ–
ತದು ಲಿಂಗಾರೂಢನಂ ಮಾಡುವುದು ಶರಣಸಾಂಗತ್ಯವಾ ಸಂಗಮಂ ಪಿಂ–
ಗದವೊಲ್ ನೀಂ ಮಾಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ॥ ೫೭ ॥

ಹರಭಕ್ತರ್ ಬಂದೊಡುರ್ಬುತ್ತವರ ಚರಣಮಂ ಕಣ್ಗಳೊಳ್ ಕಂಠದೊಳ್ ಪೇ–
ರುರದೊಳ್ ಭಾಳಾಗ್ರದೊಳ್ ದೋರ್ಯುಗದೊಳುಭಯಗಂಡಂಗಳೊಳ್

ತಾಳ್ದುಮೆತ್ತು–
ತ್ತೊರೆಯುತ್ತಪ್ಪುತ್ತೆ ಹಿಗ್ಗುತ್ತತುಳಸುಖದೊಳಾಳುತ್ತುಮೇಳುತ್ತೆ ಬಾಳ್ದಿ–
ರ್ಪಿರವಂ ನೀನಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೫೮ ॥

ಮೃಡಭಕ್ತವ್ರಾತವಾನಂದದೊಳಿದಿರ್ವರೆ ಕಂಡಾರ್ತದಿಂ ಸ್ನೇಹದಿಂ ಸೈ–
ಗೆಡೆದೆನ್ನೈಶ್ವರ್ಯವೆನ್ನಾಗಿನ ತವನಿಧಿಯೆನ್ನಾಯುವೆನ್ನೆಲ್ಲಮುಂ ನಿ–
ಮ್ಮಡಿಗಳ್ ಸರ್ವಸ್ವಮುಂ ನಿಮ್ಮಡಿಗಳೊಡವೆ ಆಂ ಕಾಪಿನಾಳೆಂದು ಚಿತ್ತಂ–
ಗುಡುತಿರ್ಪಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೫೯ ॥

ಮುದದಿಂದಂ ನಿಮ್ಮ ಪೂಜಾರಚನೆಯನೊಲವಿಂ ಕಂಡು ಸರ್ವಜ್ಞನಿಂತೊ–
ಪ್ಪಿದನಾನಂದಾಬ್ಧಿಯಿಂತೊಪ್ಪಿದನಹಿಧರನಿಂತೊಪ್ಪಿದಂ ಶಂಭುವಿಂತೊ–
ಪ್ಪಿದನೆಂದಶ್ರುಪ್ರವಾಹಂ ಪರಿಯಿಡೆ ಪುಳಕಂ ಪೊಣ್ಮೆ ಸಂಸ್ತೋತ್ರಮಂ ಮಾ–
ಳ್ಪುದನೆನ್ನೊಳ್ ಕೂಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ॥ ೬೦ ॥

ಅದನಿನ್ನೇನೆಂಬೆನಾಹಾ ಗುರುತರಸುಖಮಂ ತುಂಗಭದ್ರಾನದೀತೀ–
ರದೊಳಿರ್ದುತ್ತುಂಗಹಸ್ತಂ ಮುಕುಲಿತನಯನಂ ಭೂತಿಸರ್ವಾಂಗನಾಗಿ–
ರ್ದು ದಯಾಂಭೋರಾಶಿ ಗಂಗಾಧರ ಪುರಹರ ಸರ್ವೇಶನೆಂದುರ್ಬುವಾ ಸೌ–
ಖ್ಯದ ಪೆರ್ಚಂ ಕೊಟ್ಟು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ॥ ೬೧ ॥

ಎನಗಿನ್ನೆಂತೆಂಬ ಚಿಂತಾಪ್ರತತಿ ಹಱಿದು ಹಾಱಿತ್ತು ಕಾಮಕ್ಕೆ ಮೋಹ–
ಕ್ಕನುಗೆಯ್ವೊಂದಾಗ್ರಹಂ ಕಟ್ಟನೆ ಕರಗಿತ್ತು ಮಾತ್ಸರ್ಯದೊಂದುಜ್ಜುಗಂ ಕ–
ಱ್ರನೆ ಕಂದಿತ್ತತ್ತಮಿತ್ತಂ ಮಿಗೆ ಮಸಗುವ ಕೋಪಂ ಕರಂ ತರ್ಗಿ ಕುರ್ಗಿ–
ತ್ತೆನಿಪಂದಂ ಮಾಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೬೨ ॥

ತಳಿರಿಂ ಪೂವಿಂ ಫಲವ್ರಾತದಿನೊಱಗುವ ಚೂತವ್ರಜಚ್ಛಾಯೆಯೊಳ್ ಕೋ–
ಮಳಹಂಸಸ್ತೋಮವಾಮಭ್ರಮರಕುಳವಿಕಾಸಾಬ್ಜಕಾಸಾರದೊಳ್ ನಿ–
ರ್ಮಳನಿಷ್ಪಂದಪ್ರಕಾಶಸ್ಥಳದೊಳಮಳಲಿಂಗಾರ್ಚನಾಸಕ್ತ ಚಿತ್ತೋ–
ಜ್ಜ್ವಳನಾಗಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೬೩ ॥

ಅತುಳಸ್ವಚ್ಛಾಂಬುವಿಂ ಮಜ್ಜನಕೆಱೆದು ನವೀನಪ್ರಸೂನಪ್ರತಾನ–
ದ್ಯುತಿ ಸುತ್ತಲ್ ಸುತ್ತಿ ನಿಮ್ಮಂ ಸವಿನುಡಿ ಕವಿಯಲ್ ಬಣ್ಣಿಸುತ್ತಶ್ರು ಮೀಱಲ್

ನುತರೋಮಾಂಚಂಗಳೇಳಲ್ ಬೆಮರ್ವನಿ ನೆಗೆಯಲ್ ಗದ್ಗದಂ ಪೊಣ್ಮೆ ಪೂಜಾ–
ತತಿಯಂ ಮಾಳ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೬೪ ॥

ನೆನೆಯುತ್ತುಂ ಪೂಜಿಸುತ್ತಂ ಚರಣದೊಳಲರುತ್ತುಂ ಮರಲ್ದೀಕ್ಷಿಸುತ್ತುಂ
ಮುನಿಯುತ್ತುಂ ಮುದ್ದಿಸುತ್ತುಂ ತೊನೆದು ತವಕಿಸುತ್ತುರ್ವುತುಂ ಗರ್ವಿಸುತ್ತುಂ
ಜಿನುಗುತ್ತುಂ ಜೀವಿಸುತ್ತುಂ ಧಿಣಿಧಿಣಿರವದಿಂದಾಡುತುಂ ಪಾಡುತಿರ್ಪೊಂ–
ದನುರಾಗಂ ಮಾಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೬೫ ॥

ಎನಿಸುಂ ಮತ್ತನ್ಯದೈವಕ್ಕೆಱಗದ ಸಿರಮುಂ ನೇತ್ರಮುಂ ಶ್ರೋತ್ರಮುಂ ಮ–
ನ್ಮನಮುಂ ಮದ್‌ಬುದ್ಧಿಯುಂ ಮತ್‌ಕರತಳಯುಗಮುಂ ಜಿಹ್ವೆಯುಂ

ಘ್ರಾಣಮುಂ ಮಿ–
ಕ್ಕಿನ ಸರ್ವಾಂಗಂಗಳುಂ ನಿಮ್ಮಯೆ ದೆಸೆಗೆ ಕರಂ ಚೇಷ್ಟಿಸುತ್ತೊರ್ಮೆಯುಂ ನಿ–
ಲ್ವಿನಮೆನ್ನೊಳ್ ಕೂಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ॥ ೬೬ ॥

ಮುದದಿಂ ತ್ವತ್‌ಕೀರ್ತಿಯಂ ಕೇಳ್ವೆಡೆಯೊಳತುಳರೋಮಾಂಚದಿಂ ಸ್ಪಂದದಿಂ ಗ–
ದ್ಗದದಿಂ ಸ್ವೇದಂಗಳಿಂ ಕಂಪನದಿನೊಲವಿನಿಂ ಲೀಲೆಯಿಂ ಲೋಭದಿಂ ಸ–
ನ್ಮುದದಿಂ ಸಂತೋಷದಿಂ ಶಾಶ್ವತ ಸುಖಮುಖದಿಂ ಶೈವಸಾಮ್ರಾಜ್ಯ ಸಮ್ಯಕ್–
ಪದವಾಂತಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೬೭ ॥

ಹರನಾಮಂ ಕರ್ಣಮಂ ತಾಗಿದ ಸಮಯದೊಳಾನಂದದಿಂದುರ್ಕಿ ರೋಮಾಂ–
ಕುರವೆಳ್ದಶ್ರುಪ್ರವಾಹಂ ಗಳಗಳನಿಳಿತಂದಂಗವಲ್ಲಾಡಿ ಭಿನ್ನ–
ಸ್ವರದಿಂದಂ ಗದ್ಗದಂ ಪುಟ್ಟುತೆ ಬೆಮರ್ವನಿಗಳ್ ಪೊಣ್ಮೆ ಸಲ್ಲೀಲೆಯಿಂದಿ–
ರ್ಪಿರವಂ ನೀನಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೬೮ ॥

ಮನದೊಳ್ ವಾಕ್ಯಂಗಳೊಳ್ ನೋಳ್ಪೆಡೆಗಳೊಳೊಲವಿಂ ಮಾಳ್ಪ ಕಜ್ಜಂಗಳೊಳ್

ಕಾ–
ನನದೊಳ್ ಕಾಮಂಗಳೊಳ್ ತಣ್ಣೆಳಲೊಳೆ ಬಿಸಿಲೊಳ್ ಜಾಗ್ರದೊಳ್

ಸ್ವಪ್ನದೊಳ್ ಮೂ–
ರ್ಚ್ಛನೆಯೊಳ್ ದಾರಿದ್ರ್ಯದೊಳ್ ಸಂಪದದೊಳೆ ಸುಖದೊಳ್ ದುಃಖದೊಳ್

ದೇವ ನಿಮ್ಮಂ
ನೆನೆಯುತ್ತಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೬೯ ॥

ಭರದಿಂದಂ ಭೀತಿಯಿಂದಂ ಶರಣವಚನದಿಂದಾಸೆಯಿಂ ಭಾಷೆಯಿಂದ–
ಚ್ಚರಿಯಿಂ ಡಂಭಿಂ ವೃಥಾಳಾಪದಿನಸವಸದಿಂ ಕಾಮದಿಂ ಕೋಪದಿಂ ಕೂ–
ರ್ಪರ ದಾಕ್ಷಿಣ್ಯಂಗಳಿಂ ಖ್ಯಾತಿಯಿನನುದಿನವೆಲ್ಲಂದದಿಂ ದೇವ ನಿಮ್ಮಂ
ಸ್ಮರಿಯಿಪ್ಪಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೭೦ ॥

ಚದುರಿಂದಂ ವೇಷಮಂ ತೋಱದೆ ನಿಜಗುಣಮಂ ಬೀಱದತ್ಯುಷ್ಣಮಂ ಹೇ–
ಱದೆ ಡಂಭಿಂ ಸಾರದೆಂತುಂ ಶರಣವಚನಮಂ ಮೀಱದತ್ತಿತ್ತಲುಂ ಜಾ–
ಱದೆ ಬೇಱೊಂದಿಚ್ಛೆಯಿಂ ಕೀಱದೆ ಪರವಶದಿಂ ತಾಱದೀ ಭಕ್ತಿಯಂ ಮಾ–
ಱದೆ ಬಾಳ್ವಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೭೧ ॥

ಇದನೊಲ್ವೆಂ ದೈನ್ಯಮಂ ಸೂಡದೆ ಪರವಧುವಂ ನೋಡದೇನೊಂದುಮಂ ಬೇ–
ಡದೆಯಾರಂ ಮಿಥ್ಯೆಯಿಂ ಕಾಡದೆ ಪರಸುಖದೊಳ್ ಬಾಡದುದ್ರೇಕದೊಳ್ ಕೋ–
ಡದೆ ಪಾಪಾಂಭೋಧಿಯೊಳ್ ಕೂಡದೆ ಚಪಳತೆಯಂ ನೀಡದತ್ಯಾಶೆಯಂ ಮಾ–
ಡದೆ ಬಾಳ್ವಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೭೨ ॥
ಸತಿ ಕಾರುಣ್ಯಂ ಕುಮಾರಂ ಮತಿ ಸಖನುರು ಸತ್ಯಂ ಪ್ರಧಾನಂ ವಿವೇಕಂ
ಸ್ತುತಿ ಭಂಡಾರಂ ಸುಧರ್ಮಂ ಕರಿತುರಗರಥಾಖ್ಯಂ ನಿರಾಶಾ–ಸ್ವದೇಶಂ

ಸತತಂ ತಾನಾಗಿ ಶಾಂತಿಸ್ಥಲದೊಳೆಸೆವ ಸದ್ಭಕ್ತಿಸಪ್ತಾಂಗರಾಜ್ಯ
ಸ್ಥಿತನಾಗಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೭೩ ॥

ಗುರುವಂ ನಂಬಿರ್ದು ಮತ್ತಾ ಗುರುಕರುಣದೆ ಪಂಚಾಕ್ಷರೀ ಮಂತ್ರಮಂ ತಾ–
ಳ್ದು ರಹಸ್ಯಂ ಭಕ್ತಿಯಿಂದಂ ಜಪಮನೆಣಿಸಿ ಗುರ್ವಾಜ್ಞೆಯಂ ಮೀಱದತ್ಯಾ–
ದರದಿಂದಂ ನೆತ್ತಿಯೊಳ್ ಪೊತ್ತನುಪಮಸುಖದಿಂ ಬಾಳ್ವ ಭೃತ್ಯತ್ವಮಂ ಮ–
ದ್ಗುರುವೇ ನೀನಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೭೪ ॥

ಅಲರಿಂ ಕೂರ್ತಿಟ್ಟೊಡಂ ಚಕ್ರದಿನುಱೆ ಮುಳಿದಂತಿಟ್ಟೊಡಂ ಹಂಸತೂಲ
ಸ್ಥಲದೊಳ್ ತಾಂ ಬೈತೊಡಂ ಮುಳ್ಗಳ ಹೊಸಹಸೆಯೊಳ್ ಬೈತೊಡಂ ಸ್ನೇಹ ದಿಂದಂ
ನಲವಿಂದಂ ಸ್ತೋತ್ರಮಂ ಮಾಡಿದೊಡೆ ಪಳಿದೊಡಂ ಸರ್ವ ಮೊಂದುಂ ದ ಮೆಂ ದಾಂ
ಸಲೆ ಕಾಣ್ಬಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೭೫ ॥

ಎಸೆವೀ ಪಂಚಾಕ್ಷರೀಮಂತ್ರಮೆ ಗುರುತರಮಂತ್ರಂ ವಿಶುದ್ಧಾಂಗಲೇಪಂ
ಭಸಿತಂ ರುದ್ರಾಕ್ಷಿಯೇ ಭೂಷಣತತಿ ಪರಮಸ್ವಾಮಿ ನೀಂ ಪೂಜ್ಯನಾನಂ–
ದಸಮೇತಂ ಭಕ್ತನೇ ಸತ್‌ಕುಲಜನೆನಿಪಿದಂ ನಂಬಿ ಮತ್ತೇನುವಂ ಭಾ–
ವಿಸದಿರ್ಪಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೭೬ ॥

ಕರೆವಲ್ಲಿಂ ಮುನ್ನವೋ ಓ ಮಗನೆ ಮಗನೆ ಬಂದೆಂ ದಿಟಂ ಬಂದೆನೆಂದಾ–
ದರದಿಂದಂ ನೀನೆ ಬಂದೆನ್ನವಯವನಿತಂ ಮುಟ್ಟಿ ನೊಂದಾ ಬಳಲ್ದಾ
ಕರೆದಾ ಕಂದಾ ಎನುತ್ತುಂ ಕೃಪೆ ಮಿಗೆ ನಲವಿಂ ನೋಡಿ ಮುಂಡಾಡುತೆಂದುಂ
ಸಿರದೊಳ್ ಕೈಯಿಕ್ಕಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೭೭ ॥

ನಿಮಗೆನ್ನಂ ಮಾಱುಗೊಟ್ಟೆಂ ಪುರಹರ ನಿಮಗೆನ್ನಂ ಸದಾ ತೊಳ್ತುಗೊಟ್ಟೆಂ
ನಿಮಗೆನ್ನಂ ಸೂಱೆಗೊಟ್ಟೆಂ ನಿಮಗೆ ಹರುಷದಿಂದೊಚ್ಚತಂ ಕೊಟ್ಟೆನಾಹಾ
ನಿಮಗೆನ್ನಂ ಮಚ್ಚುಗೊಟ್ಟೆಂ ಗುರುವೆ ಘನವೆ ಸಂತೋಷದಿಂದೊಪ್ಪುಗೊಟ್ಟೆಂ
ನಿಮಗೆನ್ನಂ ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೭೮ ॥

ಮುದದಿಂದಂ ಕಾಮಮಂ ಕೋಪಮನುಱೆ ಜಱೆದಾಮೋಹಮಂ ದಾಂಟಿ ಲೋಭ–
ತ್ವದ ಬೇರಂ ಕಿೞ್ತು ಮಾತ್ಸರ್ಯಮನುಡುಗಿ ಮದಾಲೇಪಮಂ ತೀರ್ಚಿಯಾಶಾ
ಸದನಕ್ಕಾಸತ್ತು ಬೇಸತ್ತತುಳಶಿವಸುಖಾವಾಸದೊಳ್ ಭಕ್ತಿಯಿಂ ತ್ವತ್
ಪದಮಂ ಸಾರ್ವಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೭೯ ॥

ಎನಗಾರ್ ದೈವಂ ವಿರೂಪಾಕ್ಷನೆ ಗುರುವೆನಗಾವಂ ವಿರೂಪಾಕ್ಷನೇ ಕೇಳ್
ಜನಕಂ ತಾನಾರ್ ವಿರೂಪಾಕ್ಷನೆ ಜನನಿಯದಾವಳ್ ವಿರೂಪಾಕ್ಷನೇ ಆ–
ಳ್ದನದಾವಂ ಶ್ರೀವಿರೂಪಾಕ್ಷನೆ ನಿಜಸಖನಾವಂ ವಿರೂಪಾಕ್ಷನೇ ಎಂ–
ಬಿನಿತಂ ಸೈತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೮೦ ॥

ಮನೆದೈವಂ ಮುಖ್ಯದೈವಂ ಸುಖತರಕುಲದೈವಂ ಪರಾನಂದದೈವಂ
ಮನದೊಳ್ ನಟ್ಟಿರ್ಪ ದೈವಂ ಶರಣಜನಮಹೋತ್ಸಾಹದೈವಂ ಕರಂ ಪೆಂ–
ಪಿನ ದೈವಂ ದೈವದೈವಂ ಸಕಲಸುಕೃತದೈವಂ ಸುಧಾಕಾರದೈವಂ
ಘನದೈವಂ ನೀನೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೮೧ ॥

ಪರಮಾರ್ಥಂ ನಿಮ್ಮ ಸಮ್ಯಕ್ ಪರತರನಿಜಮಂ ಭಾವಿಸಲ್ ಬಣ್ಣಿಸಲ್ ತಾ–
ಮರಸೋದ್ಭೂತಂಗೆ ಶಕ್ರಂಗಸುರರಿಪುಗೆ ವೇದಕತರ್ಕ್ಯಂ ದಲೆಂದಂ–
ದೊರೆವಂತಾಂ ಮರ್ತ್ಯನೆಂಬೀ ವಚನಮೆ ಪರಿಹಾಸಾಸ್ಪದಂ ದೇವ ನೀನೇ
ಕರುಣಂಗೆಯ್ಯುತ್ತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೮೨ ॥

ಬಿಸವಂ ತಾಳ್ದಿರ್ದು ನಿತ್ಯಂ ಸ್ಮರನನುರಿಪಿಯುಂ ಕಾಮಿ ಸರ್ವೇಶ್ವರಂ ಮ–
ತ್ತಸಮಂ ಭಿಕ್ಷೇಶ್ವರಂ ಸರ್ವಮನಳಿದನಘಂ ಚಂದ್ರನಂ ಸೂಡಿಯುಂ ಕೋ–
ಪಸಮಾಯುಕ್ತಂ ವಿರುದ್ಧಪ್ರಕೃತಿ ತಿಳಿಯದಾರ್ಗಂ ಕೃಪಾವಾರ್ಧಿ ನಿನ್ನಂ–
ಘ್ರಿಸರೋಜಂದೋಱೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ॥ ೮೩ ॥

ಸ್ಥಿರವಲ್ಲಂ ನೋಡೆ ಸರ್ಗಸ್ಥಿತಿಲಯವಾಗಿರ್ಪುದಿಂತೀ ಪ್ರಪಂಚಂ
ಸ್ಥಿರರೂಪಂ ನೀನೆ ಕರ್ಮದ್ವಿತಯವಿರಹಿತಂ ನೀನೆ ಶುದ್ಧಾತ್ಮಕಂ ನೀ–
ನೆ ರಸಾದಿವ್ಯೋಮದಿಕ್‌ಪೂರಿತ ನಿಜನಿಧಿ ನೀನೆಂಬಭಿಜ್ಞಾನಮಂ ಮದ್

ಗುರುವೇ ನೀನಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೮೪ ॥

ಅಪರಿಚ್ಛಿನ್ನಂ ಸ್ವತಂತ್ರಂ ನಿರವಧಿಯಮಳಂ ಶಂಕರಂ ನಿತ್ಯನಾನಂ–
ದಪದಂ ಶಾಂತಾರ್ಕಕೋಟಿಪ್ರಭನಜರನಚಿಂತ್ಯಂ ಪರಂಧಾಮರೂಪಂ
ವಿಪುಳಜ್ಞಾನಾಬ್ಧಿ ಸತ್ಯಂ ನಿರುಪಮನಿಧಿ ನೀನೆಂಬಭಿಜ್ಞಾನಮಂ ನೀಂ
ಕೃಪೆಯಂ ಮಾಡುತ್ತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೮೫ ॥

ಸ್ಥೂಲಂ ಸೂಕ್ಷ್ಮಂ ಸುಸೂಕ್ಷ್ಮಂ ಸುಲಭಸುಲಭಂ ಪುಣ್ಯಪಾಪಪ್ರದೂರಂ
ನೀಲಗ್ರೀವಂ ಚಿದಾತ್ಮಂ ಭವನಭವನನೂನಾದ್ಯನಾದ್ಯಂತಶೂನ್ಯಂ
ಕಾಲಘ್ನಂ ಕಾಲರೂಪಂ ನತನಕರವಿಪಜ್ಜಾಲವಿಚ್ಛೇದಲೀಲಾ
ಲೋಲಂ ನೀಂ ನೀನೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ॥ ೮೬ ॥

ಶಿವ ಸರ್ವಾಧಾರ ಗಂಗಾಧರ ಪುರಹರ ಸರ್ವಜ್ಞ ಸರ್ವೇಶ ಗೌರೀ–
ಧವ ನೀಲಗ್ರೀವ ಕಾಲಾಂತಕ ಪಶುಪತಿ ಫಾಲಾಕ್ಷ ಭೋಗೀಂದ್ರಭೂಷಾ–
ಭವ ರುದ್ರೇಶಾನ ಭರ್ಗ ಪ್ರಮಥನಿಧಿ ಮಹಾದೇವ ಮಾರಾರಿ ನಿತ್ಯೋ–
ತ್ಸವ ಸತ್ಯಪ್ರೇಮಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೮೭ ॥

ಗಿರಿಶ ಶ್ರೀಕಂಠ ದಕ್ಷಾಧ್ವರಹರ ವೃಷಭಾರೂಢ ಕಾಪಾಲಿಯಂಧಾ–
ಸುರವೈರಿ ವ್ಯೋಮಕೇಶ ಕ್ರತುಕುಲನೃಪತಿ ಸ್ಥಾಣು ಭೂತೇಶ ಪಂಚಾ–
ವರಣಪ್ರತ್ಯಕ್ಷ ಪಂಚಾನನ ಮೃಡ ಗಜಚರ್ಮಾಂಬರ ಶ್ರೇಷ್ಠ ವಿಶ್ವೋ–
ದರ ಸದ್ಯೋಜಾತ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೮೮ ॥

ಹರ ಭೀಮ ತ್ರ್ಯಕ್ಷ ಭಕ್ತವ್ರಜಹೃದಯ ಪಿನಾಕಿ ತ್ರಿಶೂಲಿ ತ್ರಿಕಾಲಾ–
ಕ್ಷರ ನಿರ್ದೇಹಾಭವಾ ಧೂರ್ಜಟಿ ಜಟಿಲ ಶಿರೋಮಾಲಿ ಶಂಭು ಪ್ರಪಂಚೋ–
ತ್ತರ ಪಂಚಬ್ರಹ್ಮ ಪಂಚಾಧಿಕ ಹಿಮಕರಚೂಡಾಮಣೀ ವೀರಭದ್ರೇ–
ಶ್ವರ ಕಾಲಾತೀತ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೮೯ ॥

ವರಕಾರುಣ್ಯಾಬ್ಧಿ ಷಡ್ದರ್ಶನಹಿತ ಪರಮಸ್ವಾಮಿ ಸರ್ವಜ್ಞ ಪಂಚಾ–

ಕ್ಷರ ಗರ್ಭಾವಾಸ ಮಾದ್ಯತ್ ಪ್ರಮಥಜನಪರೀತೋಷ ವಿಶ್ವೇಶ ತತ್ತ್ವಾ–
ಕರ ತಾರಾದ್ರೀಶ ನಾರಾಯಣನಯನಲಸತ್‌ಪಾದ ನಾದಾತ್ಮ ಭಕ್ತಾ–
ತುರಚಿತ್ತಗ್ರಾಹಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ
॥ ೯೦ ॥

ಶಿವ ನಿಮ್ಮಿಂ ಪುಟ್ಟಿತೀ ಮಾಯೆ ಗಡೆನಿಪಿದನಾಂ ಸೈರಿಸೆಂ ಪುಟ್ಟಿತೆಂಬೊಂ–
ದವಿಚಾರಂ ನಿಷ್‌ಕ್ರಿಯಾತ್ಮಪ್ರಭುತನಕೆ ಕರಂ ಹಾನಿ ಶುದ್ಧಾತ್ಮನೊಳ್ ಶಂ–
ಭುವಿನೊಳ್ ಸಮ್ಯಕ್ ಪರಾನಂದದ ತವನಿಧಿಯೊಳ್ ನಿನ್ನೊಳೀ ಭ್ರಾಂತಿಯೆಂಬಾ
ಶ್ರವೆಯಂ ತರ್ಗೊತ್ತಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೯೧ ॥

ಮೊದಲಿಂದಂ ಕೂರ್ಮರೋಮಂ ಬಗೆಯ ಶಶಿವಿಷಾಣಂ ವಿಯತ್ ಪುಷ್ಪದಂತಿ–
ಲ್ಲದುದೇ ಸತ್ಯಂ ಪ್ರಪಂಚೆಂದಱಿದು ತಿಳಿದು ನಿಷ್ಕಾಮ ನಿರ್ಮಾಯ ನಿತ್ಯಾ–
ಭ್ಯುದಯಾನಂದೈಕತೇಜೋನಿಧಿ ನಿರುಪಮ ನಿರ್ಲೇಪ ನಿರ್ವಾಣ ನೀನೆಂ–
ಬಿದನೇ ಸೈತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೯೨ ॥

ತೋಱುತ್ತಿರ್ಪೀ ಜಗಂ ತಾನಱಿವಿನ ಮುಖದೊಳ್ ತೋಱದಿರ್ಪಂತೆ ತೋರ್ಕುಂ
ತೋಱಲ್ ಪೇಳಲ್ಕೆ ಕೇಳಲ್ಕಸದಳಮೆನಿಪಾ ಬ್ರಹ್ಮತಾ ಬ್ರಹ್ಮವಾಗು–
ತ್ತಾಱುಂ ಬಣ್ಣಕ್ಕಮೇಳುಂ ತನುವಿನ ಪೊರೆಗೆಂಟುಂ ಶರೀರಕ್ಕೆ ಮಿಕ್ಕುಂ
ಮೇಱಿರ್ಪಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೯೩ ॥

ತೊಳಗುತ್ತಿರ್ಪರ್ಕನಿಂದಾಗಸವೆನಿತನಿತಂ ಮಾಡಿದಂತಿರ್ಪ ಧಾತ್ರೀ–
ತಳಮೆಲ್ಲಂ ಚಂದ್ರನಿಂದಂ ಸಮೆದುದೆನಿಸಿದಂತಿರ್ಪ ದಿಕ್‌ಸಂಕುಳಂ ನಿ–
ರ್ಮಳವಿದ್ಯುಲ್ಲೇಖೆಯಿಂ ನಿರ್ಮಿಸಿದವೊಲೆಸೆದಿರ್ಪಾ ಪರಂಜ್ಯೋತಿಯೆನ್ನೊಳ್
ಬೆಳಗುತ್ತಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೯೪ ॥

ಗುರುವಿಂ ಸುದ್ಧಾತ್ಮನಾದೆಂ ಗುರುವಿನ ಕೃಪೆಯಿಂದಂ ಜಗತ್ ಪೂಜ್ಯನಾದೆಂ
ಗುರುವಿಂ ನಿಷ್ಕಾಮನಾದೆಂ ಘನತರಗುರುವಿಂ ಶಾಂತಿಸಂಪನ್ನನಾದೆಂ
ಗುರುವಿಂ ಸರ್ವಜ್ಞನಾದೆಂ ದಿಟವೆನಿಪಿದನೆನ್ನೊಳ್ ದಿಟಂ ಮಾಡುತುಂ ಮದ್
ಗುರುವೇ ಗೌರೀಶ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೯೫ ॥

ಎನ್ನಾನಂದಾಬ್ಧಿಯೇ ಎನ್ನನುಪಮಸುಧೆಯೇ ಎನ್ನ ಪುಣ್ಯಸ್ವರೂಪವೇ
ಎನ್ನಾಯುಃಪುಂಜವೇ ಎನ್ನಯ ಗತಿಮತಿಯೇ ಎನ್ನ ವಿಜ್ಞಾನಮೂರ್ತಿ
ಎನ್ನತ್ಯಾಶ್ಚರ್ಯವೇ ಎನ್ನತಿಶಯ ಗುರುವೇ ಎನ್ನ ಚೈತನ್ಯದಾಗೇ
ಎನ್ನ ಪ್ರಾಣೇಶ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೯೬ ॥
ನಿತ್ಯಜ್ಞಾನೈಕಮೂರ್ತೀ ಸುಖತರಪರಮಾನಂದ ಸರ್ವಜ್ಞ ಮೂರ್ತೀ
ನಿತ್ಯತ್ವಾಧಾರಮೂರ್ತೀ ನಿರವಯವಮಹಾಮೂರ್ತಿ ನಿರ್ಲೇಪಮೂರ್ತೀ
ನಿತ್ಯಪ್ರತ್ಯಕ್ಷಮೂರ್ತೀ ನಿಖಿಲಗುಣಗಣಾಧಾರ ನಿರ್ಮಾಯಮೂರ್ತೀ
ನಿತ್ಯಶ್ರೀಮೂರ್ತೀ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೯೭ ॥

ಬಿಡೆನೀಶಾ ನಿಮ್ಮ ಪಾದಾಬ್ಜಮನೆಲೆಲೆ ಬಿಡೆಂ ಸೀಳ್ದೊಡಂ ಪೋಳ್ದೊಡಂ ಪೊ-
ಯ್ದೊಡಮಂದಿಂದೆಂದುಮೆಂತು ಬಿಡೆನಭವ ಬಿಡೆಂ ಶಂಕರಾ ಮಾಣೆನಾಂ ಬ ಲ್-
ವಿಡಿದೆಂ ಮತ್ತತ್ತಮಿತ್ತಂ ಚಲಿಯಿಸದೆಲೆ ಮತ್ಸ್ವಾಮಿ ನಿಮ್ಮಾಜ್ಞೆಯಿಂದಂ
ಮೃಡನೇ ಭಕ್ತಾರ್ಥಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೯೮ ॥

ಕರ್ತಾರಂ ನೀನೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ
ಭರ್ತಾರಂ ನೀನೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ
ಹರ್ತಾರಂ ನೀನೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ
ಕೂರ್ತಿಂತೋರಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೯೯ ॥

ಭರದಿಂ ಕೇಳ್ದೋದುವಾನಂದದೊಳತಿಶಯದಿಂ ಮಚ್ಚಿ ಲಾಲಿಪ್ಪವರ್ಗಾ-
ದರದಿಂ ನಿತ್ಯಾಯುವಂ ಸಂಪದವನಭವನೀಯುತ್ತುಮಿರ್ಕೆಂದನೂನಂ
ಧರೆಯೊಳ್ ಕೈಕೊಂಡು ರಕ್ಷಾಶತಕವನೊಲವಿಂ ಪ್ರೇಮದಿಂ ನಚ್ಚಿ ಪೇಳ್ದಂ
ಹರಿದೇವಂ ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ೧೦೦ ॥

* * *

ಪಿಂದೇನೇನಾಗಿ ಬಂದೆಂ ಮನುಜಜನನಮುಂ ತಾನಿದೆಂತಾಯ್ತು ಸಂಸಾ
ರಂ ದೋಷಂ ಕಾಮಲೋಭಾದಿಗಳೆನಗಮಿವೆಲ್ಲಿಂದೆ ಬಂದತ್ತು ಮತ್ತಂ
ಮುಂದೇನಾದಪ್ಪೆನೆಂದಾನಱಿಯದೆ ಭಯದಿಂ ಶಂಕಿಸುತ್ತಿರ್ದಪೆಂ [ನಿಃ]
ಸಂದೇಹಂ ಮಾಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ* ॥ ೧೦೧ ॥



*

**ಪಂಪಾಶತಕ**

*ಶ್ರೀಮದ್‌ರಾಜಕಳಾವತಂಸ ಧರೆ–ಚಂದ್ರಾರ್ಕಾಗ್ನಿ–ಜೀವಾನಿಲ
ವ್ಯೋಮಾಂಬುಪ್ರಕರಂಗಳಿಂ ಸಕಲಮಂ ರಕ್ಷಿಪ್ಪ ಸರ್ವೇಶ ಸು–
ತ್ರಾಮಾದಿತ್ರಿದಶವ್ರಜಾರ್ಚಿತಪದಾಂಭೋಜಾತ ಸದ್ಭಕ್ತಿಯಂ
ಪ್ರೇಮಂ[೧] ಕೈಮಿಗೆ ಮಾಡು ನೀನೆನಗೆ ಪಂಪಾ[ಶ್ರೀ][೧] ಪುರಾಧೀಶ್ವರಾ ॥ ೧ ॥

ಪುಳಕದ ಹಾದಿಗೆಂದು ಪಥವಪ್ಪುದು ಕಣ್ಗಳ ಕೋಡಿಗೆಂದು ನೀ–
ರ್ಗಳ ಕಡೆಗಾಣ್ಬುದೆನ್ನ ಚರಣಂಗಳ ಲೀಲೆಗದೆಂದು ಕೀಲ್ಗಳ–
ಚ್ಚಳಿವುದು ಕೈಯ ಕಂಪದ ಕದಂ ತೆಱೆದಪ್ಪುದು ತಪ್ಪದೀ ಮನೋ–
ಗಳಿತತರಾಬ್ಧಿಗೆಂದು ಮಿಗೆ ಮೇಱೆಯಗಲ್ವುದು ಹಂಪೆಯಾಳ್ದನೇ ॥ ೨ ॥

ಪುಳಕದ ತೊಟ್ಟಿಲೊಳ್ ಬೆಮರ ಮಜ್ಜನದಿಂದೆಸಲೆಣ್ಣೆ(?)ಯಿಟ್ಟು ಕ–
ಣ್ಗಳ ಮೊಲೆವಾಲನೂಡಿ ತೊದಳಿಂದವೆ ಬಣ್ಣಿಸಿ ಹಾಡಿ ಕಂಪದಿಂ–
ದಳವಡೆ ತೂಗಿಯಚ್ಚಸುಖನಿದ್ರೆಯನಂದಮನುಂಟುಮಾಡಿ ನಿ–
ಶ್ಚಳನಿಜಭಕ್ತಿಯಿತ್ತು ಸಲೆ ರಕ್ಷಿಪುದೆಂದೆಲೆ ಹಂಪೆಯಾಳ್ದನೇ
॥ ೩ ॥

ಹರಹರ ಎನ್ನ ಕೈಯ ಹಸಿವೋಡಲಣಂ ತನುವಿಂದೆ ಪೂಜೆಯಂ
ವಿರಚಿಪೆನೆಂದೊ ಕಣ್ಗಳ ಬಱಂ ತಿಳಿಯಲ್ ಪೊಸನೋಟದಿಂದೆ ಕೆಂ–
ಕರಿಸುವೆನೆಂದೊ ಮೈಮಱೆದು ಕಣ್ಗೆಡಲಪ್ಪಿ ಮನೋನುರಾಗದಿಂ

ನೆರೆವೆನದೆಂದೊ ನಿಮ್ಮನತಿನೇಹದೆ ಪೇಳೆಲೆ ಹಂಪೆಯಾಳ್ದನೇ ॥ ೪ ॥

ಕರೆವುದದೆಂದು ಕಾಲ್ವಿಡಿಸಿಕೊಳ್ವುದದೆಂದು ದಯಾಕಟಾಕ್ಷದಿಂ
ಪೊರೆವುದದೆಂದು ಮೆಲ್ನುಡಿಗಳಿಂ ಮದವೇಱಿಪುದೆಂದು ಸೋಂಕಿನಿಂ
ದೊರೆವುದದೆಂದು ಸಂತಸದೆ ಪೆರ್ಚಿಪುದೆಂದಮರ್ದಪ್ಪಿನೊಳ್ ಕರಂ
ಕರಗಿಪುದೆನ್ನನೆಂದೊಸೆದು ನೀಂ ಕೃಪೆಯಿಂದೆಲೆ ಹಂಪೆಯಾಳ್ದನೇ ॥ ೫ ॥

ತೆರೆಮಸಗಲ್ ಸುಖಾಶ್ರುವಿದಿರೇಱುತಿರಲ್ ಪುಳಕಂ ಬೆಮರ್ ಕರಂ
ಪರಿಯಿಡೆ ಗದ್ಗದಂ ಸುಳಿಗೊಳುತ್ತಿರೆ ಕಂಪನಮುರ್ಕಿ ಲೀಲೆಯೊ–
ತ್ತರಿಸುತಿರಲ್ ನವೀನ ನಿಜಭಕ್ತಿರತಂಗಿಣಿ ಮೀಱುತುಬ್ಬರಂ–
ಬರಿಯುತುಮೆನ್ನ ಮೇಲೆ ಮಡುಗಟ್ಟುವುದೆಂದೆಲೆ ಹಂಪೆಯಾಳ್ದನೇ ॥ ೬ ॥

ನಡೆತಂದೆನ್ನಯೆ[೧] ಕಣ್ಗಳಲ್ಲಿರು ವಿರೂಪಾಕ್ಷಾ ವಿರೂಪಾಕ್ಷ ನೀಂ
ಬಿಡದಂತೆನ್ನಯೆ[೧] ಜಿಹ್ವೆಯಲ್ಲಿರು ವಿರೂಪಾಕ್ಷಾ ವಿರೂಪಾಕ್ಷ ನೀಂ
ಎಡೆಗೊಂಡೆನ್ನಯೆ[೧] ಚಿತ್ತದಲ್ಲಿರು ವಿರೂಪಾಕ್ಷಾ ವಿರೂಪಾಕ್ಷ ನೀಂ
[೨]ಇಡಿ[೨]ದಂತೆನ್ನೊಳೆ[೩] ಕೂಡಿ ನಿಲ್ಲೆಲೆ ವಿರೂಪಾಕ್ಷಾ ವಿರೂಪಾಕ್ಷನೇ ॥ ೭ ॥

ನೋಡದ ಕಣ್ಗಳೇಕೆ ಸಲೆ ಕೇಳದ ಕರ್ಣಮದೇಕೆ ಭಕ್ತಿಯಿಂ
ಪಾಡದ ಬಾಯದೇಕೆ ಪೆಸರ್ಗೊಳ್ಳದ ಜಿಹ್ವೆಯದೇಕೆ ಪೂಜೆಯಂ
ಮಾಡದ ಕೈಗಳೇಕೆ ನೆಱೆ ಸೋಂಕದ ದೇಹಮದೇಕೆ ಕೂಡಿಯ–
ಳ್ಳಾಡದ ಚಿತ್ತವೇಕೆನಗೆ ಹಂಪೆಯಲಿಂಗವೆ ನಿಮ್ಮೊಳಕ್ಕಱಿಂ
॥ ೮ ॥

ಎಂದುಂ ನಿಮ್ಮೊಳೆಲೇ ಮಹೇಶನೆ ಮನಂ ಬಂದಂತೆ ಚಿಂತಿಪ್ಪ ಕಣ್–
ಬಂದಂತೀಕ್ಷಿಪ ಜಿಹ್ವೆ ಬಂದ ತೆಱದಿಂ ಬಣ್ಣಿಪ್ಪ ಮೈಯ್ಯುರ್ಬಿನಿಂ
ಬಂದಂತಾಂ ಪುಳಕಿಪ್ಪ ಕೈಗಳೆನಿತುಂ ಬಂದಂತೆ ಪೂಜಿಪ್ಪ ಕಾಲ್–
ಬಂದಂತಾಡುವ ಸೈಪು ಸಾರ್ವುದೆನಗಿನ್ನೆಂದೋ ವಿರೂಪಾಕ್ಷನೇ ॥ ೯ ॥
ಇದು ಚಿತ್ರಂ ವರಮಂತ್ರಸಂತತಿ ವಿರೂಪಾಕ್ಷಂ ವಿರೂಪಾಕ್ಷನೆಂ

ಬುದೆ ಮಾತಕ್ಕಟ ತನ್ನ ಜೀವಮೆ ವಿರೂಪಾಕ್ಷಾ ವಿರೂಪಾಕ್ಷನಾ[೧]
ಮದಿನಾಗಳ್ ಪುದಿದಂತಿರಿರ್ಪುದುಮಿದೇನೀತಂಗೆನುತ್ತೆಲ್ಲರುಂ
ಪದೆದೆನ್ನಂ ನುಡಿವಂದದಿಂ ನೆನೆವೆನಿನ್ನೆಂದೋ ವಿರೂಪಾಕ್ಷನೇ[೨] ॥ ೧೦ ॥

ಕ್ರಮದಿಂ ಪೂಜಿಪ ಪೂಜೆ ಮೆಲ್ಲನೆ ಸಡಿಲ್ದಾನಂದಮಳ್ಕಾಡುತಿ–
ರ್ಕೆಮ ಸೋತ್ಸಾಹದೆ ಕಣ್ಗಳೊಳ್ ಸುಖರಸಂ ಹಸ್ತಂಗಳೊಳ್ ಕಂಪನಂ
ಕ್ರಮದೊಳ್ ನರ್ತನಮಂಗದೊಳ್ ಪುಳಕಮಾ ಜಿಹ್ವಾಗ್ರದೊಳ್ ಕಂಪನಂ
ಭ್ರಮದಿಂ ಪುಟ್ಟಲದೆಂದು ಪೂಜಿಸುವೆನಾಂ ನಿನ್ನ ವಿರೂಪಾಕ್ಷನೇ* ॥ ೧೧ ॥

ಸತಿಪುತ್ರರ್ ಮಿತ್ರರಾಪ್ತರ್ ತನುಧನಮನವೆಂಬಿಂತಿವಂ ನಿತ್ಯಮೆಂದು–
ನ್ನತರ ವ್ಯಾಸಂಗದಿಂ ಮೆಯ್ಯಱಿಯದೆ ಮರುಳಾಗಿರ್ದನೆನ್ನಂ ದುರಾಶಾ–
ವೃತನಂ ದುರ್ಮೋಹಿಯಂ ದುಸ್ತರತರವಿಷಯವ್ಯಾಪ್ತನಂ ದುರ್ವಿವೇಕೋ–
ದಿತನಂ ದುರ್ಬೋಧನಂ ರಕ್ಷಿಪುದೆಲೆ ಕೃಪೆಯಿಂದಂ ವಿರೂಪಾಕ್ಷಲಿಂಗಾ ॥ ೧೨
॥

ಅನುಪಮದಾನಿಯಪ್ರತಿಮದಾನಿ ನಿರಂತರದಾನಿ ಸಂದ ಪೆಂ–
ಪಿನ ಘನದಾನಿ ಕೌತುಕದ ದಾನಿ ಮಹೋನ್ನತದಾನಿಯೆಂದು ನಿ–
ನ್ನನೆ ಪೊಗಳುತ್ತುಮಿಂತಿದೆ ಸಮಸ್ತ ಜಗಜ್ಜನವೀ ಸುಕೀರ್ತಿಗೆ–
ನ್ನನೆ ನಡೆ ನೋಡದಿರ್ಪಿರವದರ್ಕನುಕೂಲಮೆ ಹಂಪೆಯಾಳ್ದನೇ ॥ ೧೩ ॥

ನಾನಾಜನ್ಮಂಗಳೊಳ್ ಬಾರದ ಪರಿಭವಮಂ ಬಂದ ತನ್ನಂದಮಂ ತಾ–
ನೇನೆಂದೊದೆಳ್ಳನಿತ್ತಂ ನೆನೆಯದು ತನಗೆಂತಿಚ್ಛೆಯಂತಿರ್ದು ನಿನ್ನೀ
ಧ್ಯಾನಾರಂಭಕ್ಕಣಂ ಸಲ್ಲದು ಸುಡು ಚೀಃ ಮನ್ಮನೋವೃತ್ತಿ ನಿನ್ನಂ
ತಾನಾಜಿ[೩]ಂ ನೀನೆ ಸಂತಂ ನಿಲಿಸಿದನೊಲವಿಂದಂ ವಿರೂಪಾಕ್ಷಲಿಂಗಾ*॥ ೧೪ ॥

ಪಸಿವಿಂದಂ ಬೇಂಟೆಗಂ ನಟ್ಟಡವಿಗೆ ನಡೆತಂದೇಱಿ ಬಿಲ್ವಾಗ್ರಮಂ ವ್ಯಾ–
ಪಿಸದತ್ತಿತ್ತಂ ಮೃಗಧ್ಯಾನದೊಳಿರೆ ಶಿವರಾತ್ರಿವ್ರತಂಗೆಯ್ದನೆಂದಂ–
ದೊಸೆದಾ ಬೇಡಂಗೆ ಸಾರೂಪ್ಯದ ಘನಪದಮಂ ಕೊಟ್ಟೊಡಂ ದಾನಿಯೆಂದ–

ರ್ಚಿಸಿ ನಿನ್ನಂ ನಂಬಿದೆಂ ರಕ್ಷಿಪುದೆಲೆ ಕೃಪೆಯಿಂದಂ ವಿರೂಪಾಕ್ಷನೆನ್ನಂ ॥ ೧೫ ॥
ಮೋಹಕ್ಕೋರೊರ್ಮೆ ಮಾತ್ಸರ್ಯದ ನುಡಿನೆಲೆಗೋರೊರ್ಮೆ ಸಂದಿರ್ದ

ಕಾ ಮೋ–
ತ್ಸಾಹಕ್ಕೋರೊರ್ಮೆ ಕೊರ್ವಿರ್ದೊದವಿದ ಮದಕೋರೊರ್ಮೆ ಪೆರ್ಚಿರ್ದ

ಲೋಭ
ವ್ಯೂಹಕ್ಕೋರೊರ್ಮೆ ಕೋಪೋನ್ನತಿಯ ಮಮತೆಗೋರೊರ್ಮೆ

ಮೆಯ್ವೆರ್ಚಿನಿಂ ದೇ–
ಹೋಹಂ ಎಂದೆಂಬುದಂ ಮಾಣಿಸು ಮನಕೆಯಿದೊಂದಂ ವಿರೂಪಾಕ್ಷ

ಲಿಂಗಾ ॥ ೧೬ ॥

ಮದನವಿರೋಧಿ ಬಾರ ದುರಿತಾಂತಕ ಬಾರ ಪುರಾರಿ ಬಾರ ಶಾ–
ರದಶಶಿಮೌಳಿ ಬಾರ ಫಣಿಕುಂಡಲ ಬಾರ ಮಹೇಶ ಬಾರ ಪು–
ಣ್ಯದ ನೆಲೆವೆರ್ಚೆ ಬಾರ ಸತತಂ ಪೊರೆವಾಳ್ದನೆ ಬಾರ ಮೇರೆದ–
ಪ್ಪಿದ ಕರುಣಾಬ್ಧಿ ಬಾರ ಹರ ಬಾರೆಲೆ ಬಾರೆಲೆ ಹಂಪೆಯಾಳ್ದನೇ ॥ ೧೭ ॥

ಕರಣಂಗಳ್ ಕಳೆಯೇಱೆ ಲೋಚನಯುಗಂ ನೀರೇಱೆ ಮೆಯ್ಯೆಲ್ಲವಂ–
ಕುರವೇಱಲ್ ನುಡಿ ಕಂಪವೇಱೆ ಚರಣಂಗಳ್ ಲೀಲೆಯೇಱಲ್ ಮೊಗಂ
ಸಿರಿಯೇಱಲ್ ತಲೆಗೇಱಿದುತ್ಸವದೆ ನಿಮ್ಮಂ ಪೂಜಿಸುತ್ತಾನುಮಾ–
ದರದಿಂದೀಕ್ಷಿಸುತಾಡುತಿರ್ಪುದೆನಗಿನ್ನೆಂದೋ ವಿರೂಪಾಕ್ಷನೇ

॥ ೧೮ ॥

ಕೆಯ್ಗೆ ನಮೋ ನಮೋ ಪದೆದು ಕಂಪಿಸುತೀಶ್ವರ ನಿಮ್ಮನರ್ಚಿಪಾ
ಬಾಯ್ಗೆ ನಮೋ ನಮೋ ತೊದಳದುನ್ನತಭಕ್ತಿಯೊಳೆಯ್ದೆ ಪಾಡುವಾ
ಮೆಯ್ಗೆ ನಮೋ ನಮೋ ಪುಳಕಂ ಕೆಲಸಾರ್ದುತೆ ಸೋಂಕಿ ಪೆರ್ಚುವಾ
ಸುಯ್ಗೆ ನಮೋ ನಮೋ ಬಿಡದ ಲಲ್ಲೆಯ ನೇಹದೆ ಹಂಪೆಯಾಳ್ದನಂ॥ ೧೯ ॥

ಉಡುವೊಡೆ ಸಂತತಂ ಪುಲಿದೊವಲ್ ನಿಮಗಲ್ಲದೊಡಾ ದಿಗಂಬರಂ
ಪಡುವೊಡೆ ರುದ್ರಭೂಮಿ ನಿಮಗಲ್ಲದೊಡಾ ನಿಗಮೋತ್ತಮಾಂಗಮು–
ಣ್ಬೊಡೆ ವಿಷಮಲ್ಲದಿರ್ದೊಡೆ ಸಮಸ್ತ ಜಗಂ ನಿಮಗೇನನೆಂದಪರ್
ತುಡುವೊಡೆ ಸರ್ಪನಲ್ಲದೊಡೆ ಕುಂಜರಚರ್ಮವೆ ಹಂಪೆಯಾಳ್ದನೇ ॥ ೨೦ ॥

ವಿನುತಬ್ರಹ್ಮಾಂಡಮಂ ಪುಟ್ಟಿಪ ಹರಹರ ಪಾಲಿಪ್ಪ ಸಾಮರ್ಥ್ಯರೆಂದೊಂ–
ದಿನಿಸುಂ ಕೊಂಡಾಡಿ ಭಾಪೆಂದಜಹರಿಗಳನಾಂ ಬಣ್ಣಿಸುತ್ತಿರ್ಪನೇ ಭೋಂ–
ಕನೆ ನಿಮ್ಮೊಂದಾಜ್ಞೆಯೆನ್ನೀ ಮನಕೆ ಮಸಕದಿಂದಂದು ತೋಱಿಲ್ಕಹೋ ನ–
ಚ್ಚಿನ ವಾಕ್ಯಂ ಮುದ್ರಿಸಲ್ ಸುಮ್ಮನಿರುತೆ ಮಱುವಟ್ಟೆಂ ವಿರೂಪಾಕ್ಷಲಿಂಗಾ॥ ೨೧ ॥

ನವನಿಧಿ ಬಾರ ಪುಣ್ಯನಿಧಿ ಬಾರ ಮಹಾನಿಧಿ ಬಾರ ಭಕ್ತರು–
ತ್ಸವನಿಧಿ ಬಾರ ಭಾಗ್ಯನಿಧಿ ಬಾರ ಸುಧಾರಸಕಾಯಕಾಂತಿಯು–
ದ್ಭವನಿಧಿ ಬಾರ ಸತ್ತ್ವನಿಧಿ ಬಾರ ಕೃಪಾನಿಧಿ ಬಾರ ಸತ್ಯಸಂ–
ಭವನಿಧಿ ಬಾರ ತತ್ತ್ವನಿಧಿ ಬಾರೆಲೆ ಬಾರೆಲೆ ಹಂಪೆಯಾಳ್ದನೇ ॥ ೨೨ ॥

ಹರಹರ ಕರ್ಮದೊಳ್ ಬಳಲದಿಂತು ಬರ್ದುಂಕಿದೆನ್ಯೆ ಸದಾಶಿವಾ
ನರಪರ ಸೇವೆಯೊಳ್ ಕುದಿಯದಿಂತು ಬರ್ದುಂಕಿದೆನ್ಯೆ ಮುಖಾರಿಯ–
ಸ್ಥಿರಪರದೈವದೊಳ್ ತೊಡರದಿಂತು ಬರ್ದುಂಕಿದೆನ್ಯೆ ಮಹೇಶ ಮ–
ದ್ಗುರುವೇ ಪುರಾರಿ ಪೂಜ್ಯನೆ ನಿಜಾಂಘ್ರಿಗೆ ಸಾರ್ಚಲೆ ಹಂಪೆಯಾಳ್ದನೇ॥ ೨೩

॥

ದೇವ ಮಹೇಶ ದೇವ ಗಿರಿಜಾಧಿಪ ದೇವ ಸಮಸ್ತಭಕ್ತಸಂ–
ಜೀವನ ದೇವ ಕಾಮಮದಮರ್ದನ ದೇವ ಹಿರಣ್ಯಗರ್ಭವಿ–
ದ್ರಾವಣ ದೇವ ವಿಷ್ಣುನಯನಾರ್ಚಿತಪಾದಪಯೋಜ ದೇವ [೩]ಸಂ–
ಸೇವಿತ[೩] ದೇವದೇವ ಮಮ[೪] ರಕ್ಷಕ[೪] ರಕ್ಷಿಸು ಹಂಪೆಯಾಳ್ದನೇ ॥ ೨೪ ॥

ಪುರವಂ ಸುಟ್ಟವನೀತನೀತನೆ ಹರಿಬ್ರಹ್ಮರ್ಗೆ ಸಾಮರ್ಥ್ಯದೊಂ–
ದಿರವಂ ಕೊಟ್ಟವನೀತನೀತನೆ ಮಹೋಗ್ರಾಭೀಳಸರ್ಪಂಗಳಾ–
ಭರಣಂದೊಟ್ಟವನೀತನೀತನೆ ಲಸತ್ ಶೀತಾಂಶುವಂ ಮೌಳಿಯೊಳ್
ಸ್ಥಿರವಾಗಿಟ್ಟವನೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ
॥ ೨೫ ॥

ಪರಮೇಶ ಪ್ರಭುವೀತನೀತನೆ ನಿಜಂ ನಂಬಿರ್ದ ಭಕ್ತರ್ಗೆ ತ–
ನ್ನಿರವಂ ತೋಱುವನೀತನೀತನೆ ಜಗತ್–ಸಂಹಾರವಂ ಮಾಡುವಾ
ಗರಳಂದಾಳ್ದವನೀತನೀತನೆ ಸಗರ್ವಂ ಪೆರ್ಚೆ ವಾಣೀಶನಾ
ಸಿರವಂ ಕೀಳ್ತವನೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ
॥ ೨೬ ॥

ಸ್ಮರನಂ ನೋಡಿದನೀತನೀತನೆ ಸಮುದ್ಯತ್ಕೋಪದಿಂ ದಕ್ಷನ
ಧ್ವರಮಂ ಸುಟ್ಟವನೀತನೀತನೆ ಕುಱುತ್ತೆಯ್ತಂದು ನಿಂದಂಧಕಾ–
ಸುರನಂ ಮೆಟ್ಟಿದನೀತನೀತನೆ ಕರಂ ಬಂದಾರ್ಪಿನಿಂದಂ ಗಜಾ–
ಸುರನಂ ಸೀಳ್ದವನೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ
॥ ೨೭ ॥

ವಸುಧಾವಂದಿತನೀತನೀತನೆ ಮಹಾನಾಟ್ಯಾಭಿರಂಗಂ ವಿರಾ–
ಜಿಸೆ ನಿಂದಾಡಿದನೀತನೀತನೆ ನಿತಾಂತಂ ಭಕ್ತಯೂಥಕ್ಕೆ ಸಂ–
ತಸಮಂ ಸಾರ್ಚುವನೀತನೀತನೆ ಮುರಾರಿ ಬ್ರಹ್ಮರೊಲ್ದೊಲ್ದು ಪೂ–

ಜಿಸುವೀಶಪ್ರಭುವೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ*
॥ ೨೮ ॥

ಜಿತಪುಷ್ಪಾಯುಧನೀತನೀತನೆ ಸರೋಜಾತಾಕ್ಷ ವಾಣೀಶವ–
ದಿತ ಸರ್ವೇಶ್ವರನೀತನೀತನೆ ಸಹಸ್ರಾಕ್ಷಪ್ರಮುಖ್ಯಾಮರಾ–
ರ್ಚಿತಪಾದಾಂಬುಜನೀತನೀತನೆ ಕಪಾಳಾಭೀಳಮಾಳಾವಿಮಂ–
ಡಿತವಕ್ಷಃಸ್ಥಳನೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ
॥ ೨೯ ॥

ನತದೇವಾಧಿಪನೀತನೀತನೆ ವಿರಿಂಚೋಪೇಂದ್ರಮಧ್ಯಸ್ಥಿತೋ–
ದ್ಧತಲಿಂಗೋದ್ಭವನೀತನೀತನೆ ಸಹಸ್ರಾಂಶುಪ್ರಮುಖ್ಯರ್ಕಳು–
ನ್ನತತೇಜೋನಿಧಿಯೀತನೀತನೆ ಪರಂಜ್ಯೋತಿಸ್ವರೂಪಪ್ರಕಾ–
ಶಿತಪುಣ್ಯೋದಯನೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ
॥ ೩೦ ॥

ತ್ರಿಜಗತ್‌ಪೂಜಿತನೀತನೀತನೆ ಸುರರ್ ಕೊಂಡಾಡೆ ದಿವ್ಯಾಸ್ತ್ರಮಂ
ವಿಜಯಂಗಿತ್ತವನೀತನೀತನೆ ಮನಂ ಮುಟ್ಟಿರ್ಪ ನಿಷ್ಕಾಮಭ
ಕ್ತಜನಕ್ಕಾಶ್ರಯನೀತನೀತನೆ ಲಸತ್ ಸಾಮರ್ಥ್ಯದಿಂದಂ ಶಿರೋ–
ವ್ರಜಮಂ ತಾಳ್ದವನೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ
॥ ೩೧ ॥

ವೇದಕ್ಕುನ್ನತನೀತನೀತನೆ ಹರಿಬ್ರಹ್ಮಾದಿಗಳ್ ಮಾಳ್ಪ ಸಂ–
ವಾದಕ್ಕಗ್ಗಳನೀತನೀತನೆ ಶರಣ್‌ಬೊಕ್ಕಿರ್ದ ಭಕ್ತಾಳಿಯಂ
ಕಾದುಂ ರಕ್ಷಿಪನೀತನೀತನೆ ಗಣವ್ರಾತಕ್ಕೆ ತಾಯ್‌ತಂದೆ ತಾ–
ನಾದಾ ಶಂಕರನೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ
॥ ೩೨ ॥

ಶ್ರೀ ಗಂಗಾಧರನಂ ಶಶಾಂಕಶಿಖಿಮಾರ್ತಂಡತ್ರಿಣೇತ್ರಾಂಕನಂ

ಭೋಗೀಂದ್ರಾರ್ಚಿತನಂ ರತೀಶವಿಪಿನಪ್ರೋದ್ಭೂತದಾವಾಗ್ನಿಯಂ
ಯೋಗಿವ್ರಾತಪರೀತನಂ ಶರಣಹೃದ್ರಾಜೀವಸಪ್ತಾಶ್ವನಂ
ನಾಗೇಂದ್ರಾಜಿನದಿವ್ಯವಸ್ತ್ರಧರನಂ ಕಂಡೆಂ ವಿರೂಪಾಕ್ಷನಂ
॥ ೩೩ ॥

ಹರನಂ ಶಂಕರನಂ ಶಶಾಂಕಧರನಂ ಕಾಪಾಲಿಯಂ ಕಾಲಸಂ–
ಹರನಂ ಶೂಲಿಯನೀಶನಂ ಗಿರಿಶನಂ ಭಾಳಾಕ್ಷನಂ ನೀಲಕಂ–
ಧರನಂ ಭರ್ಗನನುಗ್ರನಂ ಪರಮನಂ ಸರ್ವಜ್ಞನಂ ಶಂಭುವಂ
ಗಿರಿಜಾವಲ್ಲಭನಂ ಮನೋಜಹರನಂ ಕಂಡೆಂ ವಿರೂಪಾಕ್ಷನಂ ॥ ೩೪ ॥

ಎನ್ನಾನಂದಸುಧಾಬ್ಧಿವರ್ಧನಕಳಾಸಂಪನ್ನನಂ ಚೆನ್ನನಂ
ಮುನ್ನಾರುಂ ನೆಱೆ ಕಾಣಬಾರದ ಲಸತ್ ಕಾಪಾಲಿಯಂ ಶೂಲಿಯಂ
ಭಿನ್ನಾಭಿನ್ನಮೆನಲ್ಕೆ ತೋಱಿದ ಮಹಾನಿಸ್ಸೀಮನಂ ಭೀಮನಂ
ಚೆನ್ನಂಗಂದುಱೆ ತನ್ನನಿತ್ತಭವನಂ ಕಂಡೆಂ ವಿರೂಪಾಕ್ಷನಂ
॥ ೩೫ ॥

ಆನಂದಾಮೃತವಾರ್ಧಿಯಂ ಕೃಪೆಯೊಳೆನ್ನಂ ತೊಳ್ತುಗೊಂಡಾಳ್ದನಂ
ನಾನಾದೇವಕಿರೀಟಕೋಟಿವಿಲಸತ್ ಪಾದಾಬ್ಜನಂ ಭೃತ್ಯಸಂ–
ತಾನಾಂಭೋಧಿಸುಧಾಂಶುವಂ ದುರಿತಘೋರಧ್ವಾಂತಮಾರ್ತಾಂಡನಂ
ಭಾನುಜ್ಯೋತಿಗತರ್ಕ್ಯಕಾಂತಿಯುತನಂ ಕಂಡೆಂ ವಿರೂಪಾಕ್ಷನಂ ॥ ೩೬ ॥

ಅದೆ ನಾಗಾಸುರನುದ್ಧ ಚರ್ಮವದೆ ಮೇಣ್ ವ್ಯಾಘ್ರಾಸುರಾಕೃತ್ತಿ ನೋ–
ಡದೆ ನಾರಾಯಣನೊಂದು ದೇಹವದೆ ತನ್ನೇತ್ರಂ ಸುರೇಂದ್ರಾದಿಗಳ್
ಬೆದರಲ್ಕಪ್ರತಿಮಪ್ರತಾಪನಿಧಿಯುಟ್ಟಂ ತೊಟ್ಟನಾರ್ದೆತ್ತಿದಂ
ಪದದೊಳ್ ಪತ್ತಿಸಿ ಬಾಳ್ದ ಭಾಪುರೆ ವಿರೂಪಾಕ್ಷಂ ಲಲಾಟೇಕ್ಷಣಂ ॥ ೩೭ ॥

ಗಣನೆಗೆ ಜಿಹ್ವೆಯುಂಟೆನಿಪ ಗರ್ವದೆ ಸಾವರನೋವಿ ದೇವರೆಂ–
ದೆಣಿಸದಿರಣ್ಣ ಹಂಪೆಯರಸಂ ನಿಟಿಲಂದೆಱೆಯಲ್ ಬಳಿಕ್ಕದೆ–

ತ್ತಣ ಹರಿಯೆತ್ತಣಬ್ಜಭವನೆತ್ತಣ ವಾಸವನೆತ್ತಣಗ್ನಿಯೆ–
ತ್ತಣ ಯಮನೆತ್ತಣ ತ್ರಿದಶಸಂಕುಳವೆತ್ತಣಭಾಸ್ಕರೇಂದುಗಳ್
॥ ೩೮ ॥
ಬೆಳಗಿಂತೆಲ್ಲಿಯ[೧]ದಲ್ಲಿ ಪೋಗದೆ ಅಹಾ[೧] ಅಃ ಅಕ್ಕಟಾ [೨]ಬೇವುವ[೨]–
ಗ್ಗಳದಿಂದಂ ತ್ರಿಪುರಂಗಳಳ್ಕಮೆಯದಾವಂ ಸುಟ್ಟನಮ್ಮಮ್ಮ ಭೂ–
ತಳದೊಳ್ ನೀನಜಿವಾಂತನಲ್ತುಸಿರದಿರ್ ಮತ್ತಾರ್ ದಿಟಂ ಪೇಳೆನಲ್[೩]
ತಿಳಿಯಲ್ ಹೋ[೩] ಮದನಾರಿ ಹಂಪೆಯ ವಿರೂಪಾಕ್ಷಂ ಲಲಾಟೇಕ್ಷಣಂ॥ ೩೯ ॥

ಮದನಂ ಗರ್ಜಿಸಿ ಬಿಲ್ಲುಮಂ ಸರಲುಮಂ ಕೈಕೊಂಡು ಬಂದಾರ್ದು ಸಂ–
ಮದದಿಂದೆಚ್ಚೊಡೆ ಸಚ್ಚರಿತ್ರವಿಭು ನಿಷ್ಕಾಮಿ ಸ್ವತಂತ್ರಂ ಸಕೋ–
ಪದೆ ಭುರ್ ಭುಗಿಲೆಂಬಿನಂ ನೆಗಳ್ದ ನೇತ್ರಜ್ವಾಲೆಯಿಂ ತೊಟ್ಟನೋ–
ವದೆ ಸುಟ್ಟಂ ಮದನಾರಿ ಹಂಪೆಯ ವಿರೂಪಾಕ್ಷಂ ಲಲಾಟೇಕ್ಷಣಂ ॥ ೪೦ ॥

ಮುಳಿದು ಭುಗಿಲ್ ಭುಗಿಲ್ ಭುಗಿಲೆನಲ್ ಸುಡನೇ ತ್ರಿಪುರಂಗಳಂ ಪೊಡ–
ರ್ಪಳಿಯೆ ಘರಿಲ್ ಘರಿಲ್ ಘರಿಲೆನಲ್ ಸುಡನೇ ಕುಸುಮಾಸ್ತ್ರನಂ ಕರಂ
ಕಳಿಯೆ ಛಿಳಿಲ್ ಛಿಳಿಲ್ ಛಿಳಿಲೆನಲ್ ಸುಡನೇ ಯಮನಂ ಮನುಷ್ಯ ನೀಂ
ತಿಳಿವೊಡನೀತಿಯಂ ಬಿಸುಟು ನಂಬಿ ಶರಣ್ಬುಗು ಹಂಪೆಯಾಳ್ದನಂ ॥ ೪೧
॥

ಭಕ್ತರ ಬಂಧು ಭಕ್ತರ ಮಹಾನಿಧಿ ಭಕ್ತರ ಭಾವಸಂಪದಂ
ಭಕ್ತರ ಮಾತೆ ಭಕ್ತರ ಪಿತಂ ನಿಜಭಕ್ತರ ಪುಣ್ಯದೆಳ್ತರಂ
ಭಕ್ತರ ಮೂರ್ತಿ ಭಕ್ತರ ಸುಧಾಂಬುಧಿ ಭಕ್ತರ ಜೀವದುನ್ನತಂ
ಭಕ್ತರ ಪೆಂಪು ಭಕ್ತಜನಕಂ ನೆಱೆ ಹಂಪೆಯದೇವನೊಚ್ಚತಂ
॥ ೪೨ ॥

ಶರಣಂ ಸಂಸಾರಿಯೇ ಮಾಣ್ ಪುಸಿ ಪುಸಿ ಶರಣಂ ಕಾಮಿಯೇ ಪೇಳಲೆಂತುಂ
ಶರಣಂ ತಾಂ ಕ್ರೋಧಿಯೇ ಸಲ್ಲದು ತೆಗೆ ಶರಣಂ ಮರ್ತ್ಯನೇ ಅಲ್ಲವೈ ಕೇಳ್
ಶರಣಂ ನಿರ್ಮಾಯನೆಂತುಂ ಶರಣನತುಳನಿಷ್ಕಾಮಿಯೆಲ್ಲಂದದಿಂದಂ

ಶರಣಂ ಶಾಂತಂ ಸುಮರ್ತ್ಯಂ ಶರಣನಮಮ ತಾನೇವಿರೂಪಾಕ್ಷಲಿಂಗಂ ॥ ೪೩
॥

ಅದು ಕಣ್ಣಪ್ಪನ ಪೂಜೆಯೋಜೆ ಬಗೆಯಲ್ ವೇದೋಕ್ತಮೇ ಬೇಂಟೆಯಾ–
ಡಿದ ಜೊಮ್ಮಣ್ಣನ ಭಕ್ತಿಭಾವವಜೆಯಲ್ ವೇದೋಕ್ತಮೇ ತಂದೆಯೆ–
ನ್ನದೆ ಚಂಡೇಶ್ವರಪಿಳ್ಳೆಯಾಡಿದುದು ತಾಂ ವೇದೋಕ್ತಮೇ ಆತನೊ–
ಲ್ದುದೆ ವೇದಾಗಮನೀತಿ ಹಂಪೆಯ ವಿರೂಪಾಕ್ಷಂ ಲಲಾಟೇಕ್ಷಣಂ ॥ ೪೪ ॥
ಉಣಿಸುಂ ಸ್ತ್ರೀಸಂಗಮುಂ ನಿದ್ರೆಯುಮಿವು ಮಲಮೂತ್ರಂಗಳುಂ

ಕುಂದುಗುಂ ಸದ್
ಗುಣಮುಂ ಶಾಂತತ್ವಮುಂ ಕಾಂತಿಯುಮುರುತರಮಾರೋಗ್ಯಮುಂ

ಪೆರ್ಚುಗುಂ ಸಂ–
ದಣಿಸಿರ್ದಾಕ್ರೋಧಮುಂ ಲೋಭಮುಮತಿಭಯಮುಂ ಮೋಹಮುಂ

ಗರ್ವಮುಂ ತ–
ಲ್ಲಣಮುಂ ತೀರ್ಗುಂ ದಿಟಂ ನಿಮ್ಮಯೆ ನಿಜಶರಣಂಗಂವಿರೂಪಾಕ್ಷಲಿಂಗಾ ॥ ೪೫
॥

ಪರಿಕಿಪರುಂಟೆ ಹಂಪೆಯಧಿನಾಥನ ಭಕ್ತರ ಸದ್ಗುಣಂಗಳಂ
ಹರಹರ ಪೇಳ್ವೊಡೆನ್ನಳವೆ ಕೇಳ್ವೊಡದಾರಳವೈ ಪುರಾತನರ್
ಪರಿದುದೆ ಗಂಗೆ ನಿಂದೊಡದು ತೀರ್ಥಮೊಡರ್ಚಿತೆ ಕಾರ್ಯಮೆಂದುದೇ
ಹರವರಿಯಿರ್ದುದೇ ಸಭೆ ನಿರೀಕ್ಷಣೆಗೆಯ್ದುದೆ ಲೋಕಪಾವನಂ ॥ ೪೬ ॥

ಇದು ದಿಟವೆಮ್ಮ ಹಂಪೆಯಧಿನಾಥನ ಭಕ್ತರ ಮುಂದದಾವನೋ

ಅದಿರದೆ ನಿಲ್ವ<sup>೧</sup>ನಂ<sup>೦</sup>ತಕ ಮನೋಜ ಚತುರ್ಮುಖನಬ್ಜನೇತ್ರನೆಂ–
ದೊದವಿದತರ್ಕ್ಯರೆಂಬವರ್ಗೆ ಸುಟ್ಟಿಸಬಾರದು ರೂಹುದೋಱಬಾ–
ರದು ತಲೆಯೆತ್ತಬಾರದೆಮೆಯಿಕ್ಕಲೆಬಾರದಿಳಾತಳಾಗ್ರದೊಳ್
॥ ೪೭ ॥

ಉರಿ ನಡೆವಂತೆ ಭಾನು ನಡೆವಂತೆ ಸಿಡಿಲ್ ನಡೆವಂತೆ ನಿನ್ನ ಭ–
ಕ್ತರ ನಡೆ ದೂಷಕಾವಳಿಗೆ ಹಂಪೆಯ ದೇವ ಸುಸಾತ್ತ್ವಿಕರ್ಗೆ ಸ–
ಚ್ಚರಿತ ಶಿವಾರ್ಚಕರ್ಗೆ ಸುಖ ಪೂರಿತಶಾಂತಿಭೂಷಣರ್ಗೆ ಕೇಳ್
ಸಿರಿ ನಡೆವಂತೆಯಿಂದು ನಡೆವಂತೆ ಸುಖಂ ಸುಳಿವಂತೆ ಧಾತ್ರಿಯೊಳ್ ॥ ೪೮ ॥

ಘನಚೋದ್ಯಂ ನಿನ್ನ ಭಕ್ತಾಳಿಯ ನಡೆವಳಿ ಬೇಱೊಂದು ಸಂಸೃಷ್ಟಿ ಬೇಱೊಂ–
ದು ನಿಜಂ ಬೇಱೊಂದು ದೇಹಾಕೃತಿ ಹರಹರ ಬೇಱೊಂದು ಸಂಪತ್ತಿ

ಬೇಱೊಂ–
ದನು ಬೇಱೊಂದಿಚ್ಛೆ ಬೇಱೊಂದಘಟಿತಂ ಬೇಱದೊಂದಾಜ್ಞೆ ಬೇಱೊಂ–
ದಿನಿದಾಹಾ ಕೌತುಕಂ ಬಣ್ಣಿಸಲರಿದಂದೋ ಹೋ ವಿರೂಪಾಕ್ಷಲಿಂಗಾ॥ ೪೯ ॥

ಜಾಣರದುಂಟದುಂಟಹಹ ದುರ್ವಿಷಯಂಗಳನೊಂದಿ ಬಾಳ್ವವರ್
ಜಾಣರದುಂಟದುಂಟಕಟ ಕರ್ಮದ ಕೈಯೊಳೆ ಸತ್ತು ಹೋದವರ್
ಜಾಣರದುಂಟದುಂಟ<sup>೧</sup>ಮಮ<sup>೧</sup> ಕಾಲನ ಬಾಧೆಗೆ ಬಿಳ್ದು ನೋವವರ್
ಜಾಣರೆ ಜಾಣರಿಂದಿಹಪರಕ್ಕೆಲೆ ಭಕ್ತರೆ<sup>೨</sup> ಹಂಪೆಯಾಳ್ದನಾ
॥ ೫೦ ॥

ಇಲ್ಲಿ ಜಗಕ್ಕೆ ಪೂಜಿತರುಮಲ್ಲಿ ಪರಕ್ಕೆ ವಿಶೇಷ ಪೂಜ್ಯರಿಂ–
ತಿಲ್ಲಿಯುಮಲ್ಲಿಯುಂ ಮೆಱೆವರೆಲ್ಲಿಯುಮೆಮ್ಮ ಶಿವಾರ್ಚಕರ್ಗೆ ಮಾಣ್
ಎಲ್ಲಿಯ ವಿಷ್ಣುವೆಲ್ಲಿಯಜನೆಲ್ಲಿಯ ವಾಸವನೆಲ್ಲಿಯಗ್ನಿಯಿಂ–
ತೆಲ್ಲಿಯ ಮಾತು ಮೂಜಗದೊಳಾರ್ ಸರಿ ಪೇಳೆಲೆ ಹಂಪೆಯಾಳ್ದನೇ॥ ೫೧ ॥

ಕಲಿಯಾತಂ ಕಾಂತನಾತಂ ಸುಮನಚರಿತನಾತಂ ಕಲಾಕಲ್ಪನಾತಂ
ಕಲೆಯಾತಂ ಭೋಗಿಯಾತಂ ಚತುರವಿನುತನಾತಂ ಚಿದಾನಂದನಾತಂ
ಛಲಿಯಾತಂ ಸತ್ಯನಾತಂ ಬುಧಜನಹಿತನಾತಂ ಜಗತ್ ಪೂಜ್ಯನಾತಂ
ಸಲೆ ನಿಮ್ಮಂ ನಂಬಿ ನಿಚ್ಚಂ ಮಱಿಯದೆ ನೆನವಾತಂ ವಿರೂಪಾಕ್ಷಲಿಂಗಂ॥ ೫೨
॥

ನೋಡಿತೆ ಮಂಗಳಂ [೩]ನೆನಪೆ[೩] ಮಂಗಳ[೪]ಮಿರ್ದೆಡೆ[೪] ಮಂಗ[೫]ಳಂ ಕರಂ[೫]
ಪಾಡಿತೆ ಮಂಗಳಂ ಶರಣರೆಂದುದೆ ಮಂಗಳ[೬]ಮೊಲ್ದವರ್ ಮನಂ
ಗೂಡಿತೆ[೬] ಮಂಗಳಂ ನಡೆಯೆ ಮಂಗಳಂ ಮಾ[೭]ಡಿತೆ ಮಂಗಳಾತ್ಮಕಂ
ಮಾಡಿತೆ ಮಂಗಳಂ ಪರಮಮಂಗಳ[೮]ವೈ ಎಲೆ[೮] ಹಂಪೆಯಾಳ್ದನೇ ॥ ೫೩ ॥

ಕಲಿಯಾವಂ ಶಿವಭಕ್ತನಚ್ಚಸುಖಿಯಾವಂ ಭಕ್ತನಾವರ್ತದಿಂ
ಛಲಿಯಾವಂ ಶಿವಭಕ್ತನುತ್ತಮನದಾವಂ ಭಕ್ತನೆಲ್ಲಂದದಿಂ
ಬಲಿಯಾವಂ ಶಿವಭಕ್ತನೂರ್ಜಿತನದಾವಂ ಭಕ್ತನೀಶಂಗೆ ಬೇ–
ಳ್ವೊಲನಾವಂ ಶಿವಭಕ್ತನಾತನೆಲೆ ಸದ್‌ಭಕ್ತಂ[೯] ವಿರೂಪಾಕ್ಷನಾ
॥ ೫೪ ॥

ಕೊಂದಂ ಭಕ್ತಿಪುರಸ್ಸರಂ [೧]ಮಗನನಾ ಶ್ರೀಯಾಳ[೧]ಗೇನಾಯ್ತು[೨] ಮೇಣ್
ಕೊಂದಂ ಭಕ್ತಿಪುರಸ್ಸರಂ [೩]ಜನಕನಂ[೩] ಚಂಡೇಶಗೇನಾಯ್ತು [೪]ಪೋ[೪]
ಕೊಂದಂ ಭಕ್ತಿಪುರಸ್ಸರಂ ಜನನಿಯಂ ರಾಮಂಗದೇನಾಯ್ತು ಕೇಳ್
ಕುಂದೇ ತಾನದು ಭಕ್ತಿಯುಳ್ಳೊಡೆ ಸದಾಚಾರಂ ವಿರೂಪಾಕ್ಷನಾ ॥ ೫೫ ॥

ಮದಮಂ ಮಾಣ್ದು ದುರಾಶೆಯಂ ಪಱಿದು ಕಾಮಾಸಕ್ತಿಯಂ ಬಿಟ್ಟು ಸ–
ಮ್ಮುದದಿಂ ಲಿಂಗಮನೊಲ್ದು ನೋಡಿ ನಲಿವಾ ಸದ್ಭಕ್ತನಂತಾತನಿ–
ರ್ದುದೆ ತಾರಾಚಲಮಾತನಿರ್ದುದೆ[೫] ಹಿಮಾದ್ರೀಂದ್ರಂ ಬಳಿಕ್ಕಾತನಿ–
ರ್ದುದೆ ವಾರಾಣಸಿಯಾತನಿರ್ದುದೆ ವಿರೂಪಾಕ್ಷಂಗೆ ಪಂಪಾಪುರಂ ॥ ೫೬ ॥

ಪೆಱತೊಂದಂ ನುಡಿಯಂ ಪ್ರಪಂಚರಹಿತಂ ಕಾರ್ಪಣ್ಯಮಂ ಮಾಡನೆ–
ಳ್ದೆಱಗಂ ಕಾಮದ ಬಟ್ಟೆಯತ್ತಲೆಳಸಂ ತರ್ಕಕ್ಕೆ ಮಾತ್ಸರ್ಯವೆಂ–
ದಜೆಯಂ ಲೋಕದ ಮಾನವರ್ಗೆ ಮಣಿಯಂ ಸದ್ಭಕ್ತಸತ್ಸಂಗಮಂ
ತೊಱೆಯಂ ಸತ್ಯಮನಲ್ಲದಾಡನಚಲಂ ಭಕ್ತಂ ವಿರೂಪಾಕ್ಷನಾ ॥ ೫೭ ॥

ನಿರಪೇಕ್ಷಂ ಕರುಣಾಕರಂ ಸುಖಮಯಂ ಶಾಂತಂ ಮಹೋತ್ಸಾಹಿ ಭ–
ಕ್ತಿರತಂ ಮಂಗಳಮೂರ್ತಿ ಲಿಂಗಸುಭಗಂ ಸಂತೋಷಿ ಸತ್ಯಂ ಮಹೇ–
ಶ್ವರನುರ್ವೀಜನವಂದ್ಯನುನ್ನತನನೇಕಾಶ್ಚರ್ಯಯುಕ್ತಂ ಮಹೇ–
ಶ್ವರನಾತಂಗರಿದುಂಟೆ ಹಂಪೆಯ ವಿರೂಪಾಕ್ಷ ಪ್ರಸಾದಾನ್ವಿತಂ
॥ ೫೮ ॥

ಶಿವಭಕ್ತರ್ ಮುಟ್ಟಿದಂಭಃಕಣಮೆ ಸಕಲತೀರ್ಥಂಗಳೆಂದೆಂಬುದಂ ಕಂ–
ಡೆವಲಾ ಕಣ್ಣಪ್ಪನೊಳ್ ಮಾಡಿದುದೆ ಜಗಕೆ ಸನ್ಮಾರ್ಗವೆಂದೆಂಬುದಂ ಕಂ–
ಡೆವಲಾ ಜೊಮ್ಮಣ್ಣನೊಳ್ ಮೆಟ್ಟಿದ ಧರೆ ಪರಮ ಕ್ಷೇತ್ರಮೆಂದೆಂಬುದಂ ಕಂ–
ಡೆವಲಾ ಭೋಗಣ್ಣನೊಳ್ ಹೋ ಶರಣರೆ ಪರದೈವಂವಿರೂಪಾಕ್ಷಲಿಂಗಾ ॥ ೫೯
॥
ನತರಾಗಲ್ ಕಾದಪರ್ ನಿಂದೊಡೆ ಸರಭಸದಿಂ ಕೊಂದಪರ್ ಭೀತಿಯೊಳ್
ಸಂ–
ಯುತರಾಗಲ್ ಬಿಟ್ಟಪರ್ ತಾಂ ಮಱೆವುಗಲಸುವಿತ್ತಾಗ ಸೈತೊಡಲತ್ಯು–
ನ್ನತೆಯಿಂ ನಾಕೋರ್ವಿಯಿಂ ಜೀವಮನುರೆ ಕುಡುವರ್ ಮಾನದೊಳ್

ಶೌರ್ಯದೊಳ್ ವಾ–
ರತೆಯೊಳ್ ಭಕ್ತರ್ಗೆ ಪೋ ಮಾಣ್ ಸರಿದೊರೆ ಸಮನಾಮಂ

ವಿರೂಪಾಕ್ಷಲಿಂಗಾ ॥ ೬೦ ॥

ಇವನಂ ನೋಡಿದ ಕಣ್ಗೆ ಮತ್ತೆ ಕೆಲವುಂ ರೂಪೇ ವಿರೂಪಾಕ್ಷನೆಂ–
ಬವನಂ ಮುಟ್ಟಿದ ಕೈಗೆ ಮತ್ತೆ ಕೆಲವುಂ ಮೆಯ್ಯೇ ಪೆಸರ್ಗೇಳ್ದ ಮ–
ಚ್ಛ್ರವಣಕ್ಕಕ್ಕಟ ನೋಡೆ ಮತ್ತೆ ಕೆಲವುಂ ನಾಮಂಗಳೇ ಸ್ತೋತ್ರಮಂ
ಸವಿವಾ ನಾಲಗೆಗೊರ್ಮೆ ಮತ್ತೆ ಕೆಲವುಂ ಮಾಣ್ ಮಾಣು ಶಬ್ದಂಗಳೇ ॥ ೬೧
॥

ಮೃಡನಿರ್ದಂತಿರೆ ಕೋಟಿಕೂಟಕುಳದೈವಕ್ಕಾಸೆಯಂ ಮಾಡಿ ನೀಂ
ಕಿಡದಿರ್ ಮಾನವ ಬೇಡ ಬೇಡೆಲೆಲೆ ಪೂಣ್ಗೊಂಡಕ್ಕಟಾ ಸಾರಿದೆಂ
ನಡೆನೋಡರ್ಚಿಸು ಕೀರ್ತಿಸಾದರಿಸು ಪೆರ್ಚಾನಂದದಿಂ ಬೇಡು ಬ–
ಲ್ವಿಡಿ ನಂಬೀಗಳೆ ನಚ್ಚು ಮಚ್ಚು ನಲವಿಂದೆಂದುಂ ವಿರೂಪಾಕ್ಷನಂ ॥ ೬೨ ॥

ಸಾಲದೆ ನಿನ್ನ ಚಂಚಲತೆ ಸಾಲದೆ ನಿನ್ನ ಮದೋದ್ಧತಾಗುಣಂ
ಸಾಲದೆ ನಿನ್ನ ದುರ್ಮಮತೆ ಸಾಲದೆ ನಿನ್ನ ತಮೋವಿವರ್ಧನಂ
ಸಾಲದೆ ನಿನ್ನ ದುಷ್ಪ್ರಕೃತಿ ಸಾಲದೆ ನಿನ್ನ ದುರಾಶೆಯುಜ್ಜುಗಂ
ಸಾಲದೆ ಮೋಹದಿಂಪು ಮನವೇ ನೆನೆ ಹಂಪೆಯ ದೇವರಾಯನಂ॥ ೬೩ ॥

ಅಕ್ಷಯಸಂಪದಂ ಕಿಡದ ಕೀರ್ತಿಯನೂನಪರಾಕ್ರಮಂ ಧರಾ
ಈಕ್ಷಣಶಕ್ತಿ ದರ್ಪಕನನೇಳಿಪ ರೂಪಿನಿತೆಲ್ಲವಣ್ಣ ಕೇಳ್
ಈಕ್ಷಣದಿಂದೆ ಬರ್ಪುವೆಲೆ ಮಾನವ ನಂಬಿಯಹರ್ನಿಶಂ ವಿರೂ–
ಪಾಕ್ಷನನರ್ಚಿಸುನ್ನತನನರ್ಚಿಸಜಾತನನರ್ಚಿಸಳ್ಕಜೆಂ
॥ ೬೪ ॥

ಬಿಡು ಕರ್ಮಂ ದೈವಮೆಂದೆಂಬವರಳಿನುಡಿಯಂ ಬ್ರಹ್ಮರೊಳ್ ದಕ್ಷನೆಂಬಂ
ಮೃಡನೇಕೆಂದೆಲ್ಲರಂ ಬಲ್ಲರನೆ ನೆರಪಿ ಕೊಂಡಾಡಿದಾ ಯಜ್ಞ ಕರ್ಮಂ
ಗಡ ಭಸ್ಮೀಭೂತವೇನಾಗದೆ ಸುಡು ಸುಡು ಮತ್ತಂ ವೃಥಾಕರ್ಮಮೆಂದು–
ಗ್ಗಡಿಸಲ್ವೇಡೊಲ್ದು ಬೇಡೆಮ್ಮಭವನನೊಸೆದೀವಂ ವಿರೂಪಾಕ್ಷಲಿಂಗಂ ॥ ೬೫ ॥

ಬಿಡು ಮಾಣ್ ಮಾಣೆಲೆ ಬೊಮ್ಮವಾದಿ ಮೊಲೆಯೊಳ್ ಕೇಳ್ ನಂಬಿಗೋ ಎನ್ನನೇ

ಮೃಡನೆದ್ದಾಡನೆ ನಮ್ಮ ಗುಂಡಯನ ಮುಂದಾ ದಾಸಿಮಯ್ಯಂ ಕುಡಲ್
ಉಡನೇ ಸೀರೆಯನುಣ್ಣನೇ ಸಿರಿಯನಾಳ್ವಂ ಪೇಳೆ ಕೈಲಾಸಮಂ
ಕುಡನೇ ಸೂಜಿ‌ಯ ಚೇರಮಾಂಕಗೆ ವಿರೂಪಾಕ್ಷಂ ಲಲಾಟೇಕ್ಷಣಂ ॥ ೬೬ ॥

ಕೊಡಗೂಸೊರ್ವಳದೊಂದು ಬಟ್ಟಲೊಳೆ ಪಾಲಂ ತಂದು ಮುಂದಿಟ್ಟು ನೀಂ
ಕುಡಿಯೆಮ್ಮವ್ವೆ ದಿಟಂ ಕರಂ ಬಡಿವ‌ಳೆಂದತ್ತತ್ತು‌ ಕಾರ್ಪಣ್ಯದಿಂ
ನುಡಿಯಲ್ಕಾ ನುಡಿಗಂಜಿ ತಾನರರೆ ಕಾರುಣ್ಯಾಕರಂ ಜೂಳಿಯಿಂ
ಕುಡಿದಂ ಪಾಲನದೇಂ ಕೃಪಾಳುವೊ ವಿರೂಪಾಕ್ಷಂ ಲಲಾಟೇಕ್ಷಣಂ ॥ ೬೭ ॥

ಮುದಮಂ ಧಾತ್ರಿಗೆ ಮಾಳ್ಪುದಾವುದು ಗುಣಾಧೀಶಾಭಿಧೇಯಕ್ಕದಾ–
ವುದು ವಾಚಾಸ್ಪದಮೆಂಬುದಾವುದು ಶಿವಾಚಾರಂ ಶಿವಾಚಾರಮ–
ಲ್ಲದೆ ಬೇಱಿದು ತಾನೆಯೂರ್ಜಿತ ಗಡಂ ನಂಬೀಗ ಮುಂ ಸಾರ್ದು ನೀಂ
ಪದಪಿಂ ಮಾನವ ಮಾಡು ಲೇಸಿದು ಶಿವಾಚಾರಂ ವಿರೂಪಾಕ್ಷನಾ ॥ ೬೮ ॥

ಅನುಪಮಮಾರ್ಗವೆಮ್ಮ ಶಶಿಮೌಳಿಯ ಸಚ್ಚರಿತಂ ಧರಿತ್ರಿಗೊ–
ರ್ವನೆ ಗಣನಾಥನೆಂಬ ಶಿವಭಕ್ತನ ನೇಮವನೊಲ್ದು ನೋಡಿ ಮ–
ಚ್ಚನೆ ಸುಖದೋಱೆ ಲೋಕವಱಿಯಲ್ ಪೆಗಲೇಱಿಸಿಕೊಂಡುಪೋದನಾ–
ತನನನಿಮಿತ್ತಬಂಧುವನದೇನೆನುತಿರ್ದಪೆ ಹಂಪೆಯಾಳ್ದನಂ
॥ ೬೯ ॥

ಸ್ಮರನಿಂ ಬೆಂದುರಿವಂಗೆ ರೋಗತತಿಯಿಂದಂ ನೊಂದಳಲ್ವಂಗೆ ನಿ–
ಷ್ಠುರಮುಗ್ರಂ ಕಲುಷಂಗಳಿಂ ಬಳಲ್ವವಂಗತ್ಯುಗ್ರತಾಪಂಗಳಿಂ
ಕೊರಗುತ್ತಳ್ಕುವವಂಗೆ ಶತೃಭಯದಿಂ ಬೇಳಾಗಿ ಬೀಳ್ವಂಗೆ ಸಾ–
ದರದಿಂ ಕಾಯಲಿದೊಂದೆ ಸಾಲ್ವುದು ದಿಟಂ ನಾಮಂ ವಿರೂಪಾಕ್ಷನಾ॥ ೭೦ ॥

ಮನಮೊಸೆದರ್ಚಿಸರ್ಚಿಸು ಪೊಗಳ್ ಪೊಗಳಾಳ್ದನನಾಳ್ದನಂ ಕರಂ
ನೆನೆ ನೆನೆ ನೋಡು ನೋಡು ಮಱೆಗೊಳ್ ಮಱೆಗೊಳ್ ನೆಱೆನಂಬು ನಂಬು
ಕೆ–

ಮ್ಮನೆ ಕೆಡಬೇಡ ಬೇಡ ಭರದಿಂ ಸಲೆ ಮಚ್ಚೆಲೆ ಮಚ್ಚು ಮಚ್ಚು ವಂ–
ಚನೆಗಿಡೆ ನಚ್ಚು ನಚ್ಚು ಮಿಗೆ ಬಲ್ವಿಡಿ ಬಲ್ವಿಡಿ ಹಂಪೆಯಾಳ್ದನಂ ॥ ೭೧ ॥

ಭರದಿಂ ಲಿಂಗಾರ್ಚನಂ ಮಾಡುವ ಶಿವಕುಲವೊಂದೇ ಶಿವಾಚಾರಮಂ ಸ–
ದ್ಗುರುದೇವನಂ ಪೇಳ್ದನೆಂತೆಂತವರವರೊಲವಿಂ ಸ್ವೇಚ್ಛೆಯಿಂ ಶರ್ವನಂ ಶಂ–
ಕರನಂ ಸರ್ವೇಶನಂ ಪೂಜಿಸುವುದಱೊಳೆಯಂತಾಯಿತಿಂತಾಯಿತೆಂದೆ–
ಲ್ಲರುಮೆಂದಾಪೇಕ್ಷೆಯಿಂ ನೀಂ ಕಿಡದೆ ನೆನೆ ವಿರೂಪಾಕ್ಷನಂ ಕಾಂಕ್ಷೆಯಿಂದಂ ॥ ೭೨ ॥

ಗುರುಮತದಿಂ ಶ್ರುತಿಸ್ಮೃತಿಮತಂಗಳಿನಿಷ್ಟಮತಂಗಳಿಂದಮಾ–
ದ್ಯರ ಮತದಿಂದೆ ನೀನೊಡೆಯನೆಂದಜೆದೀಶ್ವರ ನಿಮ್ಮನರ್ಚಿಸು–
ತ್ತಿರದಿರದೆಲ್ಲರೊಳ್ ಮಥಿಸಿ ತರ್ಕಿಸಿ ನೋಯಿಸಿ ನೋಯುತುಂ ವೃಥಾ
ನೆರಮನೆಗಳ್ತು ಕಣ್ಗಿಡುವರೇಂ ಮರುಳ್ಗೊಂಡರೊ ಹಂಪೆಯಾಳ್ದನೇ ॥ ೭೩ ॥

ತೆಗೆ ತೆಗೆ ಮಿಕ್ಕ ಕೂಟಕುಳಿದೇವರನಾವಗಮುರ್ಕಿದಳ್ಕಜೆಂ
ಬಗೆ ಬಗೆ ಚಂದ್ರಚೂಡನ ಪದಾಂಬುಜಮಂ ಮನವಾಱೆ ಭಕ್ತಿಯಿಂ–
ದಗಿದಗಿದಂಗದೊಳ್ ಪುಳಕವೇಳ್ತರಲೆಳ್ದು ಪೊರಳ್ದು ಲೀಲೆಯಿಂ
ನೆಗೆನೆಗೆದಾಡಿ ಮೆಯ್ಮಱೆದು ಪೂಜಿಸು ಮಾನವ ಹಂಪೆಯಾಳ್ದನಂ॥ ೭೪ ॥

ಇದು ದಲಪೂರ್ವಮೀ ಮನುಜಜನ್ಮದೊಳುದ್ಭವಿಸಿರ್ದು ಮೂಗನಾ
ಗದೆ ಸಲೆಯಂಧನಾಗದಿರೆ ಪಂಗುಳನಾಗದೆ ಕೂನದೇಹನಾ
ಗದೆ ವಿಕಟಾಂಗನಾಗದೆ ಕಿವುಂಡನೆಯಾಗದೆ ಹೀನವರ್ಣನಾ
ಗದೆ ಮೆಱೆವಲ್ಲಿ ಪೂಜಿಸು ಮಹೋತ್ಸವದಿಂದೆಲೆ ಹಂಪೆಯಾಳ್ದನಂ॥ ೭೫ ॥

ಆಱುತುಮರ್ಚಿಸುಬ್ಬರಿಸುತರ್ಚಿಸು ಮತ್ತೊಲೆಯುತ್ತುಮರ್ಚಿಸಿಂ–
ಪೇಱುತುಮರ್ಚಿಸುನ್ನತಿಯೊಳರ್ಚಿಸು ಕೊರ್ವುತುಮರ್ಚಿಸೆಲ್ಲರೊಳ್
ಪೋಱುತುಮರ್ಚಿಸೀ ಜನನಮಂ ಪಡೆದಲ್ಲಿ ಮನುಷ್ಯ ಏನುಮಂ

ಪಾಱಿದೆಯರ್ಚಿಸೆಮ್ಮ ಕಡುಸೊಂಪಿನ ಪೆಂಪಿನ ಹಂಪೆಯಾಳ್ದನಂ ॥ ೭೬ ॥

ಪಿರಿದಿದು ಸಾರಿದಪ್ಪೆನೆಲೆ ಸಾರಿದೆನಕ್ಕಟ ಸಾರಿದೆಂ ವೃಥಾ
ಚರಿಸದಿರಿಲ್ಲಿ ಪುಟ್ಟುವುದಪೂರ್ವಮಪೂರ್ವಮದಾಗಿಯಳ್ತಿಯಿಂ–
ದಿರೆ ನಲಿದುರ್ಬಿ ಬೊಬ್ಬಿಡುತೆ ಕೊರ್ಬುತೆ ಕೂಗುತೆ ಪಾಡುತಾಡುತ–
ಬ್ಬರಿಸುತೆ ಬೀಗಿ ತೂಗುತೊಸೆದರ್ಚಿಸು ಮಾನವ ಹಂಪೆಯಾಳ್ದನಂ ॥ ೭೭ ॥

ಮನೆ ನೆಳಲಾಗೆ ಪೆಂಡಿರಿನಿದಾಗೆ ಸುತರ್ ಪಿರಿದಾಗೆಯರ್ಥದಾ–
ರ್ಜನೆ ಘನವಾಗೆ ಯೌವನಮದಾಗೆ ಬಳಿಕ್ಕದನೇನನೆಂದಪೆಂ
ತನತನಗುರ್ವುತುಂ ಬಿಡದೆ ಕೊರ್ವುತೆ ಪರ್ವುತುಮುರ್ವಿಯೊಳ್ ಕರಂ
ನನೆಕೊನೆವೋಗಿ ಮಾಯೆ ಕೊಱಚಾಡದೆ ಮಾಣ್ಬುದೆ ಹಂಪೆಯಾಳ್ದನೇ ॥ ೭೮ ॥

ವರಮುಖ್ಯಂ ಶಂಕರಾಖ್ಯಂ ಸಕಲಜನಹಿತೋಪಾಖ್ಯನಾನಂದಸೌಖ್ಯಂ
ಸ್ಥಿರಕಾಯಂ ತಾನಜೇಯಂ ಧವಳತರತನುಚ್ಛಾಯನಾನಂದಗೇಯಂ
ಪರಿಪಾಲಂ ಗೀತಲೋಲಂ ಕಮಲಭವಶಿರಶ್ಶೂಲನೌದಾರ್ಯಶೀಲಂ
ಕರುಣಾಂಗಂ ಭಕ್ತಸಂಗಂ ಮನಸಿಜಮದಭಂಗಂ ವಿರೂಪಾಕ್ಷಲಿಂಗಂ॥ ೭೯ ॥

ಎನಗಾಳ್ದಂ ತಾನೆ ನೀಳ್ದಂ ಕರಿಪತಿತನುವಂ ಸೀಳ್ದನಿಂತೊಪ್ಪೆ ಬಾಳ್ದಂ
ಘನಗಾಢಂ ವೇದಗೂಢಂ ಸಕಲಗುಣಗಣಪ್ರೌಢನತ್ಯಂತರೂಢಂ
ದ್ಯುನದೀಶಂ ಚಿತ್ ಪ್ರಕಾಶಂ ಶರಣಜನ[1]ಸದಾತೋಷನಾನಂದಕೋಷಂ[1]
ಮುನಿಸಂಗಂ [2]ಸತ್ಯಶೃಂಗಂ[2] ಕರುಣರಸತರಂಗಂ ವಿರೂಪಾಕ್ಷಲಿಂಗಂ॥ ೮೦ ॥

ಪೊಗಳೆಂ ಮಿಕ್ಕಿನ ಚಕ್ರಪಾಣಿಸರಸೀಜೋದ್ಭೂತಸಂಕ್ರಂದನಾ–
ದಿಗಳಂ ತಾನೆನೆ ಮರ್ತ್ಯಕೀಟಕರ ಮಾತಂತಿರ್ಕೆ ಮತ್ತಾವನಂ
ಬಗೆದಾರೆಂ ಬಿಡದಾ ಹರಂಗೆ ಶಶಿಭೂಷಂಗೀಶ್ವರಂಗೆಯ್ದೆ ನಾ–
ಲಗೆಯಂ ಮಾಜಿದೆನೊಲ್ದು ಹಂಪೆಯ ವಿರೂಪಾಕ್ಷಂಗದೇನೆಂದಪೆಂ॥ ೮೧ ॥
ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆಯಕ್ಕಟಾ

ತನತನಗಿಂದ್ರ–ಚಂದ್ರ–ರವಿ–ಕರ್ಣ–ದಧೀಚಿ–ಬಲೀಂದ್ರನೆಂದು ಮೇಣ್
ಅನವರತಂ ಪೊಗಳ್ದು ಕೆಡಬೇಡೆಲೆ ಮಾನವ ನೀನಹರ್ನಿಶಂ
ನೆನೆ ಪೊಗಳರ್ಚಿಸೆಮ್ಮ ಕಡು ಸೊಂಪಿನ ಪೆಂಪಿನ ಹಂಪೆಯಾಳ್ದನಂ॥ ೮೨ ॥

ಎಡಹಿದೊಡಿಲ್ಲ ನಿದ್ರೆ ನಿಡಿದಾದೊಡಮಿಲ್ಲುಸಿರಿಕ್ಕುತಿರ್ಪುಸಿರ್
ತಡೆದೊಡಮಿಲ್ಲ ಬಿಕ್ಕು ಬಿಡದೊತ್ತಿದೊಡಂ ತಱಿಸಂದೊಡಿಲ್ಲ ಸೀಂ–
ತೊಡೆ ತನಗಿಲ್ಲ ಕೆಮ್ಮಿದೊಡಮಿಲ್ಲದದಸ್ಥಿರಮಿಂತು ಕೆಟ್ಟು ಪೋ–
ಪೊಡಲಿದಕೇಕೆ ಕಾಮವಿದಕೇಕೆ ಮದಾಂಧತೆ ಹಂಪೆಯಾಳ್ದನೇ ॥ ೮೩ ॥

ಜನಿಯಿಸುತಿರ್ಪ ಕೋಟಿ ಜನನಂಗಳೊಳುತ್ತಮಮುತ್ತಮೋತ್ತಮಂ
ಮನುಜಭವಂ ವಿಚಾರಿಪೊಡಿದಂ ಪಡೆದುಂ ಮರುಳಾಗಿ ಸತ್ತೊಡೀ
ಜನನವಿದೆಂದು ಬರ್ಪುದು ವೃಥಾ ಕೆಡದಿರ್ ಕೆಡದಿರ್ ನಿರಂತರಂ
ನಿನಗೆ ಹಿತೋಪದೇಶಮಿದು ಮಾನವ ಪೂಜಿಸು ಹಂಪೆಯಾಳ್ದನಂ ॥ ೮೪ ॥

ತನ್ನಯೆ ಕಾಮಮಂ ಸುಡದೆ ತನ್ನಯೆ ಕೋಪಮುಮಂ ತೆರಳ್ಚದೀ
ತನ್ನಯೆ ಲೋಭಮೋಹಮನೆ ತನ್ನ ಮದೋನ್ನತ ಮತ್ಸರಾಳಿಯಂ
ತನ್ನೊಳೆ ತಾನೆ ಸಂತವಿಡಲೊಲ್ಲದೆಯನ್ಯರನಿಂತು ಮಾಡೆನು–
ತ್ತುಂ ನೆಱೆ ಪೇಳ್ದು ಬುದ್ಧಿಗಲಿಸಲ್ ತೆಱಪೆಲ್ಲಿತು ಹಂಪೆಯಾಳ್ದನೇ ॥ ೮೫ ॥

ಹೆಂಡತಿ ಬಾರಳರ್ಥವದು ಬಾರದು ಪುತ್ರರೆ ಬಾರರಿಪ್ಪರುಂ
ಕಂಡ ಸಖೀಜನಂ ಜನನಿಯುಂ ಪಿತನುಂ ನೆಱೆ ಬಾರರಕ್ಕಟಾ
ತಂಡದ ಪಾಪಪುಣ್ಯವಿವೆ ಬರ್ಪುವಿವರ್ಕೆ ಮಹೇಶನಂ ನತಾ–
ಖಂಡಲವೃಂದನಂ ಬಿಡದೆ ಪೂಜಿಸು ಮಾನವ ಹಂಪೆಯಾಳ್ದನಂ ॥ ೮೬ ॥
ನರರಂ ಸೇವಿಸುತಯ್ಯ ಜೀಯೆನುತುಮಿರ್ಪೇನೆಂದೊಡಂ ದೈನ್ಯಮು–
ಬ್ಬರಿಸುತ್ತುಂ ತನುಗುಂದಿಯುಂ ತನಗೆ ತಾನೆಂತಕ್ಕೆಯುಂ ಬೇಡುತಿ–
ರ್ಪರವಂ ಸುಟ್ಟು ಬಿಸುಟ್ಟು ಭಕ್ತಿಯೊಳಗೋಲಾಡಲ್ ಮನಂದಂದು ಶಂ–
ಕರನಂ ಶಾಶ್ವತನಂ ಕೃಪಾಜಲಧಿಯಂ ಕಂಡೆಂ ವಿರೂಪಕ್ಷನಂ
॥ ೮೭ ॥

ಪೋಗೆನೆ ಪೋಪ ಬಾರೆಲವೊ ಬಾರೆನೆ ಜೀಯ ಹಸಾದವೆಂದು ಬೆ–
ಳ್ಳಾಗುತೆ ಬರ್ಪ ಮಾಣೆಲವೊ ಸುಮ್ಮನಿರೆಂದೊಡೆ ಸುಮ್ಮನಿರ್ಪ ಮ–
ತ್ತಾಗಳೆ ಝುಂಕಿಸಲ್ ನಡುಗಿ ಬೀಳುವ ಸೇವೆಯ ಕಷ್ಟವೃತ್ತಿಯಂ
ನೀಗಿದೆನಿಂದು ನಿಮ್ಮ ದೆಸೆಯಿಂ ಕರುಣಾಕರ ಹಂಪೆಯಾಳ್ದನೇ ॥ ೮೮ ॥

ಎಲೆಲೆಲೆ ಮೆಟ್ಟಿ ಕೀಳ್ತನಜೆಯಾ ಕಮಲೋದ್ಭವನೂರ್ಧ್ವವಕ್ತ್ರಮಂ
ತಲೆಕೆಳಗಾಗಲೆತ್ತಿಜೆದನಂದಜೆಯಾ ನಲವಿಂ ಮುಕುಂದನ–
ಗ್ಗಲಿಸುವ ದೇಹಮಂ ತೊವಲನುರ್ಚಿದನೆಂದಜೆಯಾ ಗಜಾಸುರಾ
ಕಲಿತಶರೀರಮಂ ಬಿಡು ಪೊಡರ್ವವನಾವನೊ ಹಂಪೆಯಾಳ್ದನೊಳ್॥ ೮೯ ॥

ಮನುಜರ್ ಗಾವಿಲರೇನನೆಂಬೆನಳಿಪಂಗಾರ್ತಂಗೆ ದಂಭಂಗೆ ದು–
ರ್ಜನಶೀಲಂಗೆ ಶಿವೋಪಜೀವನವೃಥಾಲಾಪಂಗೆ ಚೀಃ ಕಾಕಭಾ–
ಜನಮಂ ಮಾಡುವರಲ್ಲದಚ್ಚ ಶಿವಭಕ್ತರ್ಗೀಶಯುಕ್ತರ್ಗೆ ಲಾಂ–
ಛನಧಾರರ್ಗೊಲಿದೀವರಾರೊಳರೆ ಪೇಳ್ ಪಂಪಾವಿರೂಪಾಕ್ಷನೇ ॥ ೯೦ ॥

ಶಿವ ಶಿವ ಪುಣ್ಯಬಂಧುವೆ ಪುರಾತನಬಂಧುವೆ ಸರ್ವಜೀವಬಂ–
ಧುವೆ ಪರಮಾರ್ಥಬಂಧುವೆ ಸುಖಪ್ರದಬಂಧುವೆ ಬಾರನಾಥಬಂ–
ಧುವೆಯನಿಮಿತ್ತ ಬಂಧುವೆ ಮನೋಹರಬಂಧುವೆ ಅತ್ಯಪೂರ್ವ ಬಂ–
ಧುವೆ ಸಕಲೈಕ ಚೇತನಸುಬಂಧುವೆ ಬಂಧುವೆ ಹಂಪೆಯಾಳ್ದನೇ ॥ ೯೧ ॥

ಎರಡುಂಟೆಂದೆನುತಿರ್ಪ ಪಾತಕರ ಮಾತಂ ಮೀಱುವೆಂ ಮೀಱುವೆಂ
ಹರನೊರ್ವಂ ಗುರುವೆಂಬುದುಂ ಧರಣಿಗಂ ತಾಂ ಸಾಱುವೆಂ ಸಾಱುವೆಂ
ಪರವಾದಿಪ್ರಕರಕ್ಕೆ ತಕ್ಕೊಡೆ ವಿರೂಪಾಕ್ಷಪ್ರಸಾದತ್ವದಿಂ
ವರದೃಷ್ಟಾಂತಮನೀಗಳೀಗಳೊಲವಿಂದಂ ತೋಱುವೆಂ ತೋಱುವೆಂ ॥ ೯೨ ॥

ಜಗದೊಳಗೆಲ್ಲ ನೋಡುವೊಡಸತ್ಯಮೆ ತೀವಿ ತುಳುಂಕುತಿರ್ಪುದಂ

ಬಗೆವೊಡೆ ಭಕ್ತನೊರ್ವನದಱಿಕೊಳ್ ನೆಱೆ ಸತ್ಯಮನಾಡಲಾತನೇ
ಪಗೆಯೆನಿಸಿರ್ಪುದೇಕೆನಲಸತ್ಯಮೆ ತಾಂ ಪಿರಿದಾಗೆಯಂತದಂ
ಬಗೆಯದೆ ಸತ್ಯಮಂ ನುಡಿಯುತರ್ಚಿಸು ಮಾನವ ಹಂಪೆಯಾಳ್ದನಂ॥ ೯೩ ॥

ಹರಿಯಂ ಕೃಷ್ಣಾವತಾರಾಂತ್ಯದೊಳೆ ಶಬರನುಂ ಕಾಲನೆಚ್ಚಲ್ಲಿ ಪೋಗಲ್
ಹರಣಂ ಕೊಂಡಾಡುತಿರ್ಪರ್ ಕೆಲಬರವನನಾ ವಿಷ್ಣುದೇಹಂಗಳಂ ಶಂ-
ಕರನುಟ್ಟಂ ತೊಟ್ಟನೆಂದೀ ಶರಣರೆನೆ ಕರಂ ಕಾಯ್ವರಯ್ಯೋ ವಿವೇಕಂ
ಪರಮಾಣಂ ಪುಟ್ಟದೀ ಶಾಪಹತರ ನುಡಿಯೇವಾಳ್ತೆ ಪಂಪಾಧಿನಾಥಾ॥ ೯೪ ॥

ಹರಿನಯನಾರ್ಚಿತಾಂಘ್ರಿಯುಗಳಂ ಹರಿ ವೇಮನಿಕಾಯ ಭೂಷಣಂ
ಹರಿಹರನೆಂದು ನಿನ್ನ ನಿಜಕೀರ್ತನೆಯಂ ಶರಣಾಳಿ ಕೂಡೆ ಡಂ-
ಗುರಿಸುತೆ ಸತ್ಯಮಂ ನುಡಿಯೆ ಸೇರದು ಶಾಪಹತರ್ಗೆ ನಿಂದೆಯಂ-
ತರ ಸಲುತಿರ್ಪುದಿಂತಿವರ ಪಾಪಮಿದಚ್ಚರಿ ಹಂಪೆಯಾಳ್ದನೇ
॥ ೯೫ ॥

ಪುಸಿಯಂ ಪೇಳ್ವುದೆ ನಿಂದೆ ಸತ್ಯಮೆ ಕರಂ ಸ್ತೋತ್ರಂ ಹರಂ ಮಾಡಿತಂ
ಪುಸಿಯಲ್ಲಂತದಜೆಂದೆ ವಿಷ್ಣುನಯನಾಂಭೋಜಾರ್ಚಿತಂ ವಿಷ್ಣು ಸಂ-
ವಸನಂ ವಿಷ್ಣು ಶರೀರಶೂಲಧರನಾ ವಿಷ್ಣುಪ್ರದಂ ಭಾಪು ವಿ-
ಷ್ಣುಶಿರೋವೇಷ್ಟನನಿಂತು ಸಂಸ್ತುತಿಯಿಪೆಂ ಪಂಪಾವಿರೂಪಾಕ್ಷನಂ ॥ ೯೬ ॥

ಕೇಳೆಲೆ ವೈಷ್ಣವಾದಿಗಳೆ ನಿಮ್ಮ ನೃಸಿಂಹನನಂದು ಕಾಣುತುಂ
ಕಾಳೆಗದಲ್ಲಿಯೆಮ್ಮ ಶರಭಂ ನುಡಿದೇನದನಕ್ಕಟಾ ನಿರೋ-
ಧಾಳಿಯನಿನ್ನುಮೊಂದನೆಲೇ ಪೇಳ್ವೆನೆ ದಕ್ಷನ ಯಾಗದಲ್ಲಿ ಚಿಃ
ಪೇಳಲದೇಕೆ ದೇವನಣುಗಂ ನಿಮಗೊಡ್ಡಿದ ಭಂಗಮೆಲ್ಲಮಂ
॥ ೯೭ ॥

ಸಡಿ ಫಡ ಮಾನವರ್ ಕುಡುವರೆಂಬುದನಾಡದಿರೆನ್ನ ಮುಂದೆ ಕ-
ಪ್ಪಡದ ಶರೀರಿಗಳ್ ತೃಣದ ಹಾಹೆಗಳಕ್ಕಟ ಮಣ್ಣ ಬೊಂಬೆಗಳ್

ಕುಡುವುವೆ ಬೇಡು ಬೇಡೊಲಿದುದೀವ ಮಹಾನಿಧಿಯಂ ಮಹೇಶನಂ
ಮೃಡನನನೂನದಾನಿಯನಲಂಪಿನ ಪೆಂಪಿನ ಹಂಪೆಯಾಳ್ದನಂ ॥ ೯೮ ॥
ಎಱಗುವೆನೆನ್ನ ಹಂಪೆಯರಸಂಗೆ ಹರಂಗೆ ಶಿವಂಗೆ ಮಿಕ್ಕಿನ–
ರ್ಗೆಱಗುವೊಡುಂಟೆ ಪಂಚಮುಖಮುಂಟೆ ಗಜಾಜಿನಮುಂಟೆ ಪತ್ತುತೋಳ್
ಕಱೆಗೊರಲುಂಟೆ ಕೆಂಜಡೆಗಳುಂಟೆ ಮರುನ್ನದಿಯುಂಟೆ ಭಾಳದೊಳ್
ಮಿಱುಗುವ ನೇತ್ರಮುಂಟೆ ಶಶಿಯುಂಟೆ ವೃಷಧ್ವಜಮುಂಟೆ ದೇವರೊಳ್॥ ೯೯ ॥

ಜಯಜಯ ಪುಣ್ಯಮಾರ್ಗಮಿದು ಸಾತ್ತ್ವಿಕ ಲಕ್ಷಣಮಿಂತಿದಾದ್ಯರ
ನ್ವಯಮಿದನೂನಭಕ್ತಿರಸಪೂರಮಿದುತ್ತಮಶೀಲಭಕ್ತರಾ–
ಶ್ರಯಮಿದು ತಪ್ಪದೆಂದು ಶರಣರ್ ಮಿಗೆ ಬಣ್ಣಿಸೆ ಪೇಳ್ದನಾಹ ಹಂ–
ಪೆಯ ಹರಿದೇವ'ನೀ ಶತಕಮಂ ಸಕಲೇಷ್ಟಫಲಪ್ರದಾತೃವಂ' ॥ ೧೦೦ ॥

* * *

ಆಹಾ ಕಷ್ಟಮನೇನ ಬಣ್ಣಿಪೆನದಂ ಸಂಸಾರದಾಯಾಸಮಂ
ಬಾ ಹೋಗೆಂಬರನಾಸೆ ಮಾಡಿ ಪಱರಂ ಕೊಂಡಾಡಿ ಬೇಸತ್ತೆನೀ
ದೇಹಕ್ಕೋಸ್ಕರ ದೈನ್ಯಬಟ್ಟೆನಕಟಾ ನೀನಲ್ಲದನ್ಯತ್ರರಂ
ದೇಹೀ ಎಂಬುದ ಮಾಣಿಸೆನ್ನನುಳುಹಾ ಪಂಪಾಪುರಾಧೀಶ್ವರಾ* ॥ ೧೦೧ ॥

ಮೃಡ ನೀಂ ಕಲ್ಲೊಳಗೇಕೆ ಪೊಕ್ಕುಸುರದಿಂತಿರ್ದಪ್ಪೆ ಭಕ್ತರ್ಗೆ ನೀಂ
ಕೊಡೆನಿನ್ನಿಲ್ಲೆನೆ ಸಾಲದೇನಡಗಲೇಕಿಲ್ಲೆಂಬುದಂ ಒಲ್ಲೆವಿ–
ಟ್ಟೊಡಲಿಂಗಿಲ್ಲದೆ ಮೇಣ್ ಪರಾನ್ನದುಣಿಸಿಂ ದಾರಿದ್ರ ನೀನಾವಗಂ
ಬಡವಂ ಬಲ್ಲೆವು ಬೇಡೆವಂಜದಿರೆಲೇ ಪಂಪಾಪುರಾಧೀಶ್ವರಾ* ॥ ೧೦೨ ॥

ವಾದಿನ್ನೇಕಬ್ಧಿಯೊಳ್ ಪುಟ್ಟಿದ ಘನಗರಳಂ ಬೆಂಕೊಳಲ್ ಪಕ್ಕೆಗೊಂಡೆ–
ಲ್ಲಾ ದೇವರ್ ಕಾವರಿಲ್ಲೆಂದಭವ ಭವತು ಪಾದಾಬ್ಜದೊಳ್ ಬೀಳೆ ನಂಜುಂ–

ಡಾದಂ ಮೈದೋಱೆ ಕೂರ್ಪಿಂ ಸರಸತಿ ಮುಂತಾದರಿಟ್ಟೋಲೆಗಾದಾ
ಮಾದೇವಂ ನೀನೆ ಮತ್ತಾರ್ ತ್ರಿಭುವನವಿಭು ಪಂಪಾವಿರೂಪಾಕ್ಷಲಿಂಗಾ*॥ ೧೦೩
॥



*
**ಸೋಮೇಶ್ವರಶತಕ**

ಶ್ರೀಮತ್ಕೈಲಾಸವಾಸಂ ಸ್ಮಿತಮೃದುವಚನಂ ಪಂಚವಕ್ತ್ರಂ ತ್ರಿಣೇತ್ರಂ
ಪ್ರೇಮಾಬ್ಧೀಪೂರ್ಣಕಾಯಂ ಪರಮಪರಶಿವಂ ಪಾರ್ವತೀಶಂ ಪರೇಶಂ
ಧೀಮಂತಂ ದೇವದೇವಂ ಪುಲಿಗೆಱೆನಗರೀ ಶಾಸನಾಂಕಂ ಮೃಗಾಂಕಂ
ಸೋಮೇಶಂ ಸರ್ಪಭೂಷಂ ಸಲಹುಗೆ ಜಗಮಂ ಸರ್ವದಾ ಸುಪ್ರಸನ್ನಂ॥ ೧
॥

ಕೆಲವಂ ಬಲ್ಲವರಿಂದೆ ಕಲ್ತು ಕೆಲವಂ ಶಾಸ್ತ್ರಂಗಳಿಂ [೧]ಕೇಳಿ ತಾಂ[೧]
ಕೆಲವಂ ಮಾಳ್ಪವರಿಂದೆ ಕಂಡು ಕೆಲವಂ ಸ್ವಜ್ಞಾನದಿಂ ನೋಡುತಂ
ಕೆಲವಂ ಸಜ್ಜನ ಸಂಗದಿಂದಲಱೆಯಲ್ ಸರ್ವಜ್ಞನ[೨]ಪ್ಪಂತೆ ಕೇಳ್[೨]
ಪಲವುಂ ಪಳ್ಳ ಸಮುದ್ರವೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೨ ॥

ಅದಱೆಂ ನೀತಿಯೆ ಸಾಧನಂ ಸಕಲಲೋಕಕ್ಕೆಲ್ಲ ಬೇಕೆಂದು ಪೇ–

ಳಿದ ಸೋಮಂ ಸುಜನರ್ಕಳೀ ಶತಕದೊಳ್ ತಪ್ಪಿರ್ದೊಡಂ ತಿದ್ದಿ ತೋ–
ರ್ಪುದು ನಿಮ್ಮುತ್ತಮ ಸದ್ಗುಣಂಗಳ ಜಗದ್ವಿಖ್ಯಾತಮಂ ಮಾಳ್ಪುದುಂ
ಮುದದಿಂ ನಿಮ್ಮವನೆಂಬುದೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೩ ॥
ಮುಕುರಂ ಕೈಯೊಳಿರಲ್ಕೆ ನೀರನೆಳಲೇಕೈ ಕಾಮಧೇನಿ^ರ್ದುಮೂ–^
ಟಕೆ ಗೊಡ್ಡಾಕಳನಾಳ್ವರೇ ಗುಣಯುತರ್ ಪಾಲುಂಡು ಮೇಲುಂಬರೇ
ಶುಕನೋದಿಂದತಿ ಚೆಲ್ವೆ ಕಾಕರವ ರಂಭಾನೃತ್ಯಕಂ ಡೊಂಬರೇ
ಸಖರಿಂದುನ್ನತ ವಸ್ತುವೇ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೪ ॥

ಸವಿವಣ್ಣಲ್ಲಿನಿಮಾವು ಸರ್ವರಸದೊಳ್ ಶೃಂಗಾರ ಸಂಭಾರದೊಳ್
ಲವಣಂ ಭಾಷೆಗೆ ಬಾಲಭಾಷೆ ಸಿರಿಯಲ್ಲಾರೋಗ್ಯ ದೈವಂಗಳೊಳ್
ಶಿವ ಬಿಲ್ಲಾಳಿನೊಳಂಗಜಂ ಜನಿಸುವಾ ಜನ್ಮಂಗಳೊಳ್ ಮಾನವಂ
ಕವಿತಾವಿದ್ಯೆ ಸುವಿದ್ಯೆಯೊಳ್ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೫ ॥

ಕವಿಯೇ ಸರ್ವರೊಳುತ್ತಮಂ ಕನಕವೇ ಲೋಹಂಗಳೊಳ್ ಶ್ರೇಷ್ಠ ಜಾ–
ಹ್ನವಿಯೇ ತೀರ್ಥದೊಳುನ್ನತಂ ರತುನದೊಳ್ ಸ್ತ್ರೀರತ್ನಮೇ ವೆಗ್ಗಳಂ
ರವಿಯೇ ಸರ್ವಗ್ರಹಂಗಳೊಳ್ ರಸಗಳೊಳ್ ಶೃಂಗಾರವೇ ಬಲ್ಮೆ ಕೇಳ್
ಶಿವನೇ ದೈವ ಜಗಂಗಳೊಳ್ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೬ ॥

ರವಿಯಾಕಾಶಕೆ ಭೂಷಣಂ ರಜನಿಗಾ ಚಂದ್ರಂ ಮಹಾಭೂಷಣಂ
ಕುವರಂ ವಂಶಕೆ ಭೂಷಣಂ ಸರಸಿಗಂಭೋಜಾತಗಳ್ ಭೂಷಣಂ
ಹವಿ ಯಜ್ಞಾಳಿಗೆ ಭೂಷಣಂ ಸತಿಗೆ ಪಾತಿವ್ರತ್ಯವೇ ಭೂಷಣಂ
ಕವಿಯಾಸ್ಥಾನಕೆ ಭೂಷಣಂ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೭ ॥

ಧರಣೀಶಂ ಧುರಧೀರನಾಗೆ ಧನಮುಳ್ಳಂ ತ್ಯಾಗಿಯಾಗಲ್ ಕವೀ–
ಶ್ವರ ಸಂಗೀತ ಜಾಣನಾಗೆ ಸುಕಲಾಪ್ರೌಢಂಗಂ ಚೆಲ್ವೆ ಕೈಸೇರಲುಂ
ಬರೆವಂ ಧಾರ್ಮಿಕನಾಗೆ ಮಂತ್ರಿ ಚತುರೋಪಾಯಂಗಳಂ ಬಲ್ಲೊಡಂ
ದೊರೆವೋಲ್ ಚಿನ್ನಕೆ ಸೌರಭಂ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೮ ॥

ಕುರುಡಂ ಕನ್ನಡಿಯಂ ಕವೀಂದ್ರರ ಮಹಾದುರ್ಮಾರ್ಗಿಗಳ್ ತ್ಯಾಗಿಯಂ
ಬಱಡಂ ಬಾಲರ ಮುದ್ದ ಬಂಜೆ ಕಡುಚೋರಂ ಚಂದ್ರನಂ ಕಾವ್ಯದ–
ಚ್ಚರಿಯಂ ಗಾಂಪರು ಪಾಪಿಗಳ್ ಸುಜನರಂ ಮಾಣಿಕ್ಯಮಂ ಮರ್ಕಟಂ
ಜಱಿಯಲ್ ಸಿಂಗವ ಕುನ್ನಿಯೇಂ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೯ ॥
ಹರನಿಂದುರ್ವಿಗೆ ದೈವವೇ ಕಿ[೧]ರಣಕಿಂದುಂ ಬಿಟ್ಟು ಸ್ವಾದುಂಟೆ ಪೆ–
ತ್ತರಿಗಿ[೨]ಂತುಂಟೆ ಹಿತರ್ಕಳುಂ ಮಡದಿಯಿಂ ಬೇಱಾಪ್ತರಿನ್ನಿರ್ಪರೇ
ಸರಿಯೇ ವಿದ್ಯೆಕೆ ಬಂಧು ಮಾರನಿದಿರೊಳ್[೨] ಬಿಲ್ಲಾಳೆ ಮೂಲೋಕದೊಳ್
ಗುರುವಿಂದುನ್ನತದೈವವೇ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೧೦ ॥

ಹಿತಮಂ ತೋಱುವನಾತ್ಮಬಂಧು ಪೊಱಿದಾಳ್ವಂ ತಂದೆ ಪಾತಿವ್ರತಾ
ಸತಿಯೇ ಸರ್ವಕೆ ಸಾಧನಂ ಕಲಿಸಲೊಂ[೩]ದಂ ವರ್ಣ[೩]ಮಾತ್ರಂ ಗುರು
ಶ್ರುತಿಮಾರ್ಗಂ ಬಿಡದಾತ ಸುವ್ರತಿ ಮಹಾಸದ್ವಿದ್ಯೆ ಪುಣ್ಯಪ್ರಭಾ
ಸುತನೇ ಮುಕ್ತಿಗೆ ಮಾರ್ಗವೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೧೧ ॥

ಪಳಿಯರ್ ಪೇಸಿಕೆಯಿಂದ ಪುತ್ರವತಿಯೆಂದೆಂಬರ್ ಸದಾ ದೇವತಾ
ಕೆಲಸಂ ಮುಂಜಿ ವಿವಾಹ ಶೋಭನಶುಭಕ್ಕಂ ಯೋಗ್ಯವಂ ನೋಡೆ ಕಂ–
ಗಳ ನೀಡಲ್ ಕುಲಕೋಟಿ ಮುಕ್ತಿದಳೆಗುಂ ಸುಜ್ಞಾನದೊಳ್ ಕೂಡಿದಾ
[೪]ಕುಲವೆಣ್ಣಿಂಗೆಣೆಯಾವುದೈ[೪] ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೧೨
॥

ಪ್ರಜೆಯಂ ಪಾಲಿಸಬಲ್ಲೊಡಾತನರಸಂ ಕೈಯಾಸೆಯಂ ಮಾಡದಂ
ನಿಜಮಂತ್ರೀಶ್ವರ ತಂದೆತಾಯ ಸಲಹಲ್ ಬಲ್ಲಾತನೇ ಧಾರ್ಮಿಕಂ
ಭಜಕಂ ದೈವದ ಭಕ್ತಿಯುಳ್ಳೊಡೆ ಭಟಂ ನಿರ್ಭೀತ ತಾನಾದವಂ
ದ್ವಿಜನಾಚಾರತೆಯುಳ್ಳವಂ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೧೩ ॥

ಮಳೆಯೇ ಸರ್ವಜನಾಶ್ರಯಂ ಶಿವನೆ ದೇವರ್ಕಳ್ಗೆ ತಾನಾಸ್ಪದಂ
ಬೆಳೆಯೇ ಸರ್ವರ ಜೀವನಂ ಬಡವನೇ ಸರ್ವರ್ಗೆ ಸಾಧಾರಣಂ
ಬಳೆಯೇ ಸರ್ವವಿಭೂಷಣಕ್ಕೆ ಮೊದಲೈ ಪುತ್ರೋತ್ಸವವುತ್ಸವದೊಳ್

ಕೆಳೆಯೇ ಸರ್ವರೊಳುತ್ತಮಂ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೧೪ ॥

ಸರಿಯೇ ಸೂರ್ಯಗೆ ಕೋಟಿಮಿಂಚುಬುಳುಗಳ್ ನಕ್ಷತ್ರವೆಷ್ಟಾದೊಡಂ
ದೊರೆಯೇ ಚಂದ್ರಗೆ ಜೀವರತ್ನಕೆಣೆಯೇ ಮಿಕ್ಕಾದ ಪಾಷಾಣಗಳ್
ಉರಗೇಂದ್ರಂಗೆ ಸಮಾನಮೊಳ್ಳೆಯೆ ಸುಪರ್ಣಂಗೀಡೆ ಕಾಕಾಳಿ ಸ-
ಕ್ಕರೆಗುಪ್ಪಂ ಸರಿಮಾಳ್ಪರೇ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೧೫ ॥
ಧನಕಂ ಧಾನ್ಯಕೆ ಭೂಷಣಾಂಬರ ಸುಪುಷ್ಪಂಗಳ್ಗೆ ಮೃಷ್ಟಾನ್ನ ಭೋ-
ಜನಕಂ ಸತ್ಫಲಚಂದನಾದಿಯನುಲೇಪಂಗಳ್ಗೆ ಸಮ್ಮೋಹ ಸಂ-
ವನಿತಾ ಸಂಗಕೆ ರಾಜಭೋಗಕೆ ಸುವಿದ್ಯಂಗಳ್ಗದಾರಾದೊಡಂ
ಮನದೊಳ್ ಕಾಮಿಸಿ ನೋಡರೇ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೧೬ ॥

ಗತಿಯಿಂ ಗಾಡಿಯ ಸೊಂಪಿನಿಂ ಗಮಕದಾ ಗಾಂಭೀರ್ಯದಿಂ ನೋಟದಾ
ಯತದಿಂ ಸನ್ಮೃದುವಾಕ್ಯದಿಂ ಸರಸದಿಂ ಸಂಗೀತ ಸಾಹಿತ್ಯದಿಂ
ಪ್ರತಿಪಾಡಿಲ್ಲದ ರೂಪಿನಿಂ ಪ್ರವುಢಿಯಿಂದೆಯ್ತರ್ಪ ಪಾದಾಕ್ಷಿಗಂ
ಯತಿ ತಾನಾದರು ಸೋಲನೇ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೧೭ ॥

ಕೊಲುವಾ ಕೂಟವು ನಷ್ಟಮಪ್ಪ ಕೆಲಸಂ ಕೈಲಾಗದಾರಂಬಮುಂ
ಗೆಲವೇನಿಲ್ಲದ ಯುದ್ಧ ಪಾಳುನೆಲದೊಳ್ ಬೇಸಾಯ ನೀಚಾಶ್ರಯಂ
ಹಲವಾಲೋಚನೆ ಜೂಜುಲಾಭ ಮನೆಮಾಱಾಟಂ ರಸಾದ್ಯೌಷಧಂ
ಫಲವ ಭ್ರಾಂತಿಯ ತೋರ್ಪುವೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೧೮ ॥

ಸತಿಯಾಲಾಪಕೆ ಸೋಲ್ವ ಜೂಜಿಗೆ ಖಳರ್ ಕೊಂಡಾಡುತಿರ್ಪಲ್ಲಿಗಂ
ಅತಿಪಾಪಂ ಬಹ ಕಾರ್ಯಕಲ್ಪವಿಷಯಕ್ಕಂ ದಾಸಿಯಾ ಗೋಷ್ಠಿಗಂ
ಪ್ರತಿ ತಾನಿಲ್ಲದ ಮದ್ದು ಮಂತ್ರಮಣಿಗಂ ಸಂದೇಹಗೊಂಡಲ್ಲಿಗಂ
ಮತಿವಂತರ್ ಮರುಳಪ್ಪರೇ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೧೯

॥

ಜಡನಂ ಮೂರ್ಖನ ಕೋಪಿಯಂ ಪಿಸುಣನಂ ದುರ್ಮಾರ್ಗಿಯಂ ೧ಪೆಂಡಿರಂ೧
ಬಡಿದುಂ ಬೈವನ ನಂಟರುಣ್ಣಲುಡಲುಂಟಾಗಿರ್ದೊಡಂ ತಾಳದಾ
ಕಡುಪಾಪಿಷ್ಠನ ಜಾಣ್ಮೆಯಿಲ್ಲದನನಿಷ್ಟಂ ಮಾಳ್ಪನಂ ೨ನೋಡಿಯುಂ
ನುಡಿಸಲ್ ಸಜ್ಜನರೊಲ್ವರೇ೨ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೨೦ ॥

ಅವಿನೀತಂ ಮಗನೇ ಅಶೌಚಿ ಮುನಿಯೇ ಬೈವಾಕೆ ತಾಂ ಪತ್ನಿಯೇ
ಸವಿಗೆಟ್ಟನ್ನವದೂಟವೇ ಕುಜನರೊಳ್ ಕೂಡಿರ್ಪವಂ ಮಾನ್ಯನೇ
ಬವರಕ್ಕಾಗದ ಬಂಟನೇ ಎಡಜೆಗಂ ತಾನಾಗದಂ ನಂಟನೇ
ಶಿವನಂ ಬಿಟ್ಟವ ಶಿಷ್ಟನೇ ಹರಹರಾ ಶ್ರೀ ಚೆನ್ನಸೋಮೇಶ್ವರಾ
॥ ೨೧ ॥
ಪೊರೆದುಂ ಬಾಳವೆ ಪಂದಿನಾಯ್ಗಳೊಡಲಂ ಮಾತಾಡವೇ ಭೂತಗಳ್
ತರುಗಳ್ ಜೀವಿಗಳಲ್ಲವೇ ಪ್ರತಿಮೆಗಳ್ ಹೋರಾಡವೇ ತಿತ್ತಿಗಳ್
ಮೊರೆಯುತ್ತೇನುಸಿರಿಕ್ಕವೇ ಗ್ರಹಂ ಗೃಹ ಚೆಲ್ವಾಂತಿರಲ್ ಸೇರದೇ–
೧ನಿರಲೇಕಜ್ಞರನೇಕದಿಂ೧ ಹರಹರಾ ಶ್ರೀ ಚೆನ್ನಸೋಮೇಶ್ವರಾ
॥ ೨೨ ॥

ಫಲವತ್ತಿಲ್ಲದ ರಾಜ್ಯದಲ್ಲಿ ಪ್ರಭು ದಂಡಕ್ಕಾಸೆಗೈವಲ್ಲಿ ಬಲ್
ಪುಲಿಗಳ್ ಸಿಂಗಂಗಳಿಕ್ಕೆಯಲ್ಲಿ ಪರಸ್ತ್ರೀಯಿರ್ದಲ್ಲಿ ಕುಗ್ರಾಮದೊಳ್
ಗೆಲವಂ ತೋಱದೆ ದುಃಖಮಪ್ಪಯೆಡೆಯೊಳ್ ಭೂತಂಗಳಾವಾಸದೊಳ್
ಸಲೆ ಬಲ್ಲರ್ ನಿಲಲಾಗದೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೨೩ ॥

ತವೆ ಸಾಪತ್ನಿಯರಾಟ ಸಾಲ ಮಧುಪಾನಂ ಬೇಟದಾ ಜಾರಿಣೀ
ನಿವಹಂ ಮಾಡುವಾ ಮಾಟಮಂತುಟಮಿತಂ ಮೃಷ್ಟಾನ್ನಮೆಂದೂಟ ದ್ಯೂ
ತವನಾಡುತ್ತಿಹ ಪೋಟ ಸೂಳೆಯರೊಳೊಲ್ದಿರ್ಪಾಟಮಿಂತೆಲ್ಲಮುಂ
ಸವಿಯಾಗಂತ್ಯದಿ ಕಷ್ಟವೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೨೪ ॥

ಕೊಲುತಿರ್ಪಯ್ಯಗಳೋದು ಬೇನೆಯಳಿವಾ ತೀಕ್ಷ್ಣೌಷಧಂ ಪಾಡುಬಿ
ದ್ದುಳುವಾರಂಬದ ಧಾನ್ಯ ಶತ್ರುಜಯ ಪುತ್ರೋತ್ಪತ್ತಿ ಕೈಗಿಕ್ಕುವಾ
ಬಳೆ ರಾಜಾಶ್ರಯಮಶ್ವಲಾಭದ ಧನಂ ಬೇಹಾರಮಿಂತೆಲ್ಲಮುಂ
ಪಲಕಷ್ಟಂ ಕಡೆಗೊಳ್ಳಿತೈ ಹರಹರಾ ಶ್ರೀ ಚೆನ್ನಸೋಮೇಶ್ವರಾ
॥ ೨೫ ॥

ತೆಱವಂ ಕಾಣದ ಬಾಳ್ಕೆಯಲ್ಪಮತಿ ಕ್ಷುದ್ರಾರಂಭಮಲ್ಪಾಶ್ರಯಂ
ಕಿಱುದೋಟಂ ಕಡೆವಳ್ಳಿ ಬೀಳುವನೆ ಮುಂಗೈಯಾರ್ಭಟಂ ಸಾಲದಾ
ದೊರೆಕಾರ್ಯಂ ಘೃತಮಿಲ್ಲದೂಟದ ಸುಖಂ ಮುಗ್ಧಾಂಗನಾ ಸಂಗಮುಂ
ಬಱಿಗೈಯಂ ಸುಱಿದಂತೆಲೈ  ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೨೬ ॥

ತರಮಂ ಕಾಣದ ತಾಣದಲ್ಲಿ ಕಪಟಂಗಳ್ ಮಾಳ್ಪರಿರ್ಪಲ್ಲಿ ನಿ-
ಷ್ಠುರ ಭಾಷಾನೃಪನಲ್ಲಿ ನಿಂದೆ ಬಱಿದೇ ಬರ್ಪಲ್ಲಿಯನ್ನೋದಕಂ
ಕಿಱಿದಾದಲ್ಲಿ ರಿಪುವ್ರಜಂಗಳೆಡೆಯೊಳ್ ದುಸ್ಸಂಗ ದುರ್ಗೋಷ್ಠಿಯ-
ಲ್ಲಿರಿಸಲ್ಲಿರ್ದೊಡೆ ಹಾನಿಯೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೨೭ ॥

ಸುಡು ಸೂಪಂ ಘೃತಮಿಲ್ಲದೂಟವ ಪರಾನ್ನಾಪೇಕ್ಷೆಯಾ ಜಿಹ್ವೆಯಂ
ಸುಡು ದಾರಿದ್ರ್ಯದ ಬಾಳ್ಕೆಯಂ ಕಪಟಕೂಟಂ ಮಾಳ್ಪ ಸಂಗಾತಿಯಂ
ಸುಡು ತಾಂಬೂಲವಿಹೀನ ವಕ್ತ್ರವ ಪರಸ್ತ್ರೀ ನೋಡುವಾ ಕಣ್ಗಳಂ
ನುಡಿಯಿಂ ತಪ್ಪುವ ರಾಜನಂ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೨೮ ॥

ಉಣದಿರ್ಪಾ ಧನಮಿರ್ದೊಡೇನು ಸುತನಿರ್ದೇಂ ಮುಪ್ಪಿನಲ್ಲಾಗದಾ
ಒಣಗಲ್ ಪೈರಿಗೆ ಬಾರದಿರ್ದ ಮಳೆ ತಾಂ ಬಂದೇನದಾಪತ್ತಿನೋಳ್
ಮಣಿದುಂ ನೋಡದ ಬಂಧುವೇತಕೆಣಿಸಲ್ ಕಾಲೋಚಿತಕ್ಕೈದಿದಾ
ತೃಣವೇ ಪರ್ವತವಲ್ಲವೇ ಹರಹರಾ ಶ್ರೀಚೆನ್ನಸೋಮೇಶ್ವರಾ
॥ ೨೯ ॥

[1]ಮಳೆಯಲ್ಲಿಕ್ಕಿದ ಜೇನು ಶೂದ್ರ ಕಲಿತಿರ್ಪಾ ವಿದ್ಯೆಯುಚ್ಚಿಷ್ಟಮಾ-

ಗಲು ಮೃಷ್ಟಾನ್ನವು ಸರ್ಪಕಾಯ್ವ ಧನಮಂ ಲುಬ್ಧಾರ್ಜಿತೈಶ್ವರ್ಯಮುಂ
ಹೊಲೆಪಾಡಿಂದಲಿ ಕೂಡಲಿಕ್ಕೆ ಪೆರರ್ಗಂ ತಾನಾಗದೇ ಪೋಗುವೋಲ್
ಗಳಿಸೇನುಣ್ಣದೆ ಪೋಪರ್ಯೆ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೩೦ ॥

ಚರಿಪಾರಣ್ಯದ ಪಕ್ಷಿಗೊಂದು ತರು ಗೊಡ್ಡಾಗಲ್ ಫಲಂ ತೀವಿದಾ
ಮರಗಳ್ ಪುಟ್ಟವೆ ಪುಷ್ಪವೊಂದು ಬಳಲಲ್ ಭೃಂಗಕ್ಕೆ ಪೂವಿಲ್ಲವೇ
ನಿರುತಂ ೨ಸತ್ಕವಿಗೊರ್ವಗರ್ವಿ ಪುಸಿಯುತ್ತುಂ೨ ಲೋಭಿಯಾಗಲ್ ನಿಜಂ
ಧರೆಯೊಳ್ ದಾತರು ಪುಟ್ಟರೇ ಹರಹರಾ ಶ್ರೀ ಚೆನ್ನಸೋಮೇಶ್ವರಾ॥ ೩೧ ॥

ಗಿಡುವೃಕ್ಷಂಗಳಿಗಾರು ನೀರನೆಱೆವರ್ ನಿತ್ಯಂ ಮಹಾರಣ್ಯದೊಳ್
ಕಡುಕಾರ್ಪಣ್ಯದಿ ಕೇಳ್ವವೇ ೩ಶಿಖಿಜಲೋರ್ವೀ ಮಾರುತಾ೩ಕಾಶಮಂ
ಮೃಡ ನೀನಲ್ಲದದಾವ ಸಾಕುವ ಜಗಕ್ಕಂ ಪ್ರೇರಕಂ ನೀನೆಲ್ಲೈ
ಕೊಡುವರ್ ಕೊಂಬರು ಮರ್ತ್ಯರೇ ಹರಹರಾ ಶ್ರೀ ಚೆನ್ನಸೋಮೇಶ್ವರಾ॥ ೩೨ ॥

ಧರೆ ಬೀಜಂಗಳ ನುಂಗೆ ಬೇಲಿ ಹೊಲನೆಲ್ಲಂ ಮೇದೊಡಂ ಗಂಡ ಹೆಂ–
ಡಿರನತ್ಯುಗ್ರದಿ ಶಿಕ್ಷಿಸಲ್ ಪ್ರಜೆಗಳಂ ಭೂಪಾಲಕಂ ಬಾಧಿಸಲ್
ತರುವೇ ಪಣ್ಗಳ ಮೆಲೆ ಮಾತೆ ವಿಷಮಂ ಪೆತ್ತರ್ಭಕಂಗೂಡಿಸಲ್
ಹರ ಕೊಲ್ಲಲ್ ನರ ಕಾಯ್ವನೇ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೩೩ ॥

ಮರಗಳ್ ಪುಟ್ಟಿದತಾಣಮೊಂದೆ ಖಗಕಂ ರಾಜ್ಯಂಗಳೇಂ ಪಾಳೆ ಭೂ–
ವರರೊಳ್ ತ್ಯಾಗಿಗಳಿಲ್ಲವೇ ಕವಿಗೆ ವಿದ್ಯಾಮಾತೆಯೇಂ ಬಂಜೆಯೇ
ಧರೆಯೆಲ್ಲಂ ಪಗೆಯಪ್ಪುದೇ ಕರುಣಿಗಳ್ ತಾವಿಲ್ಲವೇ ಲೋಕದೊಳ್
ನರರಂ ಪುಟ್ಟಿಸಿ ಕೊಲ್ವನೇ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೩೪ ॥

ಮೃಡ ತಾಂ ಭಿಕ್ಷವ ಬೇಡನೇ ದ್ರುಪಜೆ ತಾಂ ತೊತ್ತಾಗಳೆ ಪಾಂಡವರ್
ಪಿಡಿದೋಡಂ ತಿರಿದುಣ್ಣರೇ ಖಳನ ಕೈಯೊಳ್ ಸಿಕ್ಕಳೇ ಸೀತೆ ತಾಂ
ಸುಡುಗಾಡಕ್ಕಿಗೆ ಬಂಟನಾಗನೆ ಹರಿಶ್ಚಂ೧ದ್ರಂ ನರರ್೧ ಪೂರ್ವದೊಳ್
ಪಡೆದಷ್ಟುಣ್ಣದೆ ಪೋಪರೇ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೩೫ ॥

ಕಡಿದಾಡಲ್ ರಣರಂಗದೊಳ್ ನೃಪರೊಳಂ ತಾನಗ್ಗದಿಂ ಕಾದೊಡಂ
ಮೃಡನಂ ಮೆಚ್ಚಿಸಿ ಕೇಳ್ದೊಡಂ ತೊಳಲಿ ತಾಂ ದೇಶಾಟನಂಗೈದೊಡಂ
ಕಡಲೇಳಂ ಮಗುಚಿಟ್ಟೊಡಂ ಕಲಿಯೆ ನಾನಾ ವಿದ್ಯಪದ್ಯಂಗಳಂ
ಪಡೆದಷ್ಟಲ್ಲದೆ ಬರ್ಪುದೇ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೩೬ ॥

ಮದನಂ ದೇಹವ ನೀಗಿದಂ ನೃಪವರಂ ಚಾಂಡಾಲಗಾಳಾದ ಪೋ
ದುದು ಬೊಮ್ಮಂಗೆ ಶಿರಸ್ಸು ಭಾರ್ಗವನು ಕಣ್ಣಾಗಣಂ ನಳಂ ವಾಜಿಪಂ
ಸುಧೆಯಂ ಕೊಟ್ಟ ಸುರೇಂದ್ರ ಸೋಲ್ತ ಸತಿಯಂ ಪೋಗಾಡಿದಂ ರಾಘವಂ
ವಿಧಿಯಂ ಮೀಱುವನಾವನೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೩೭ ॥

ಹುಲುಬೇಡಂ ಮುರವೈರಿಯಂ ಕುರುಬನಾ ಶೂದ್ರೀಕನಂ ರಾಮನಂ
ಬೆಲೆವೆಣ್ಣಿಂದ ಶಿಖಂಡಿ ಭೀಷ್ಮನುಮನಾ ದ್ರೋಣಾರ್ಯನಂ ವಸ್ತ್ರವಂ
ತೊಳೆವಾತಂ ಹತಮಾಡರೇ ಪಣೆಯೊಳಂ ಪೂರ್ವಾರ್ಜಿತಂ ಹಾಗಿರಲ್
ಕೊಲನೇ ಕ್ಷುದ್ರ ಸಮರ್ಥನಂ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೩೮ ॥

ಮಧುರೇಂದ್ರಂ ಕಡುದುಷ್ಟನಾಗಲು ಬಳಿಕ್ಕೀಡೇರಿತೇ ದ್ವಾರಕಾ
ಸದನಾಂಭೋಧಿಯ ಕೂಡದೇ ಕುರುಬಲಾಂಭೋರಾಶಿಯೊಳ್ ಸೈಂಧವಂ
ಹುದುಗಲ್ ಬಾಳ್ದನೆ ಭೂಮಿಯಂ ಬಗಿದು ಪೊಕ್ಕೇಂ ದುಂದುಭಿ ರಾಕ್ಷಸಂ
ವಿಧಿ ಕಾಡಲ್ ಸುಖಮಾಂಪರೇ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೩೯ ॥

ಸುಕುಲೋದ್ಧಾರಕನಾಗಿ ಭಾಗ್ಯಯುತನಾಗಾಯುಷ್ಯಮುಳ್ಳಾತನಾ–
ಗಕಳಂಕಾಸ್ಪದಳಾಗಿ ಬಾಳ್ವ ಸತಿಯಿರ್ದಾನಂದಮಂ ಮಾಳ್ಪ ಬಾ–
ಲಕರ್ನಿರ್ದೀಶಭಕ್ತನಾಗಿ ತನುವೊಳ್ದಾರ್ಢ್ಯಂ ಸಮಂತೊಪ್ಪುವಾ
ಸುಖ ಪೂರ್ವಾರ್ಜಿತ ಪುಣ್ಯವೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೪೦ ॥

ಕಪಟಂ ಚಂದ್ರಮಗೆಯ್ದದೇ ಹರಿಯ ನಾಮಂ ಜಾರನೆಂದೆನ್ನರೇ
ತಪನಂ ಕೊಂತಿಯ ಸೋಂಕನೇ ಬುಧ ಮಹಾಪುಣ್ಯಾತ್ಮನೇ ವಾಯುಪಾ–

ದಪಗೂಳರ್ ಮುನಿವೆಣ್ಗಳಿಂ ಬಹಳ ದೂರಂ ತಾಳರೇ ಸೂಕ್ಷ್ಮದಿಂ–
ದಪನಿಂದ್ಯಂ ಬರೆ ಪೋಪುದೇ ಹರಹರಾ ಶ್ರೀ ಚೆನ್ನಸೋಮೇಶ್ವರಾ॥ ೪೧ ॥

ಕೊಡಬಲ್ಲಂಗೆ ದರಿದ್ರಮಂ ಪ್ರವುಢಗಂ ಮೂಢಾಂಗನಾ ಸಂಗಮಂ
ಮಡೆಯಂಗುತ್ತಮಜಾತಿನಾಯಕಿಯ ಪಾಪಾತ್ಮಂಗೆ ನಿತ್ಯತ್ವಮಂ
ಕಡುಲೋಭಂಗತಿ ಿದ್ರವ್ಯಮಂ ಸುಕೃತಿಿಗಲ್ಪಾಯುಷ್ಯಮಂ ನೀಡುವಂ
ಕಡುಪಾಪಿಷ್ಟನು ಬೊಮ್ಮನೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೪೨ ॥

ಪುರಗಳ್ ಬಾನೊಳು ನಿಂದುದಿಲ್ಲ ದಶಕಂಠಂಗಾಯಿತೇ ಲಂಕೆ ಸಾ–
ಗರದೊಳ್ ಪೋದುದು ದ್ವಾರಕಾನಗರಿ ಭಿಲ್ಲರ್ಗಾದುದಾ ಗೋಪುರಂ
ದುರುಳರ್ಗಾದುದು ಷಟ್ಪುರಂ ಮಧುರೆಯೊಳ್ ಕಂಸಾಸುರಂ ಬಾಳ್ದನೇ
ಸಿರಿ ಬಂದುಂ ನಿಲೆ ಪುಣ್ಯವ್ಯೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೪೩ ॥।

ಉಡುರಾಜಂ ಕಳೆಗುಂದಿ ಪೆರ್ಚದಿಹನೇ ನ್ಯಗ್ರೋದಬೀಜಂ ಕೆಲಂ
ಸಿಡಿದುಂ ಪೆರ್ಮರನಾಗದೇ ಎಳೆಗಱುಂ ಎತ್ತಾಗದೇ ಲೋಕದೊಳ್
ಮಿಡಿ ಪಣ್ಣಾಗದೆ ದೈವದೊಲ್ಮೆಯಿರಲುಂ ಕಾಲಾನುಕಾಲಕ್ಕೆ ತಾಂ
ಬಡವಂ ಬಲ್ಲಿದನಾಗನೇ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೪೪ ॥

ಸುರಚಾಪಾಯತಮಿಂದ್ರಜಾಲದ ಬಲಂ ಮೇಘಂಗಳಾಕಾರ ಬಾ–
ಲರು ಕಟ್ಟ್ಯಾಡುವ ಕಟ್ಟೆ ಸ್ವಪ್ನದ ಧನಂ ನೀರ್ಗುಳ್ಳೆ ಗಾಳೀಸೊಡರ್
ಪರಿವುತ್ತಿರ್ಪ ಮರೀಚಿಕಾ ಜಲ ಜಲಾವರ್ತಾಕ್ಷರಾದಂತಿರ್ಪ್ಪೆ
ಸಿರಿ ಪುಲ್ಲಗ್ರದ ತುಂತುರ್ಪ್ಪೆ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೪೫ ॥

ಧೃತಶಾಪಾನ್ವಿತನಾ ಹಿಮಾಂಶುಗುರುವಿಂ ದೈತ್ಯಾರಿಯನ್ಯಾಂಗನಾ
ರತಿಯಿಂ ಕೀಚಕನಂ ಬಕಾರಿ ಮುಱಿದಂ ಸುಗ್ರೀವನಿಂ ವಾಲಿ ತಾಂ
ಹತನಾದಂ ದಶಕಂಠನಾ ಹರಿಶರಕ್ಕೀಡಾದನೇವೇಳ್ವೆನಾಂ
ಅತಿ ಕಾಮರ್ಗತಿಹಾನಿಯ್ಯೆ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೪೬ ॥

ಸುಳಿದಾ ಹೊಮ್ಮಿಗವೈದೆ ಸೀತೆಯ ಖಳಂ ಕೊಂಡೋಡಿ ತಾನಾಳ್ದನೇ
ಇಳಿದಂಭೋಧಿಯ ಬಾಳ್ದನೇ ತಮಸನಂದಾಮ್ನಾಯಮಂ ಕದ್ದೊಡಂ
ತಲೆಯಂ ಕಟ್ಟರೆ ಕಂಚಿವಾಳದೊಳು ತಾಂ ಶೂದ್ರೀಕವೀರಾಖ್ಯನಂ
ಕಳವೇಂ ಕೊಲ್ಲದೆ ಕಾಯ್ವುದೇ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೪೭ ॥

ಪಿಡಿಯಲ್ ಹೊಮ್ಮಿಗವೆಂದು ಪೋದ ರಘುಜಂ ಭೂಪುತ್ರಿ ಸನ್ಯಾಸಿಯೆಂ–
ದಡಿಯಿಟ್ಟಳ್ ದಶಕಂಠನೊಯ್ದಿವಳನಂದಾಯುಷ್ಯಮಂ ನೀಗಿದಂ
ಕೊಡಬೇಡೆಂದೆನೆ ಶುಕ್ರ ರಾಜ್ಯವನಿತಂ ಪೋಗಾಡಿವಂ ರಾಕ್ಷಸಂ
ಕಡು ಮೋಹಂ ಕೆಡಿಕುಂ ದಲೈ ಹರಹರಾ ಶ್ರೀಚೆನ್ನಸೋಮೇಶ್ವರಾ ॥ ೪೮ ॥

ಖಳ ವೇದಂಗಳನೊಯ್ದನುರ್ವಿತಳಮಂ ತಾಂ ಚಾಪೆವೋಲ್ ಸುತ್ತಿದಂ
ಚಲದಿಂ ಪೋರಿದರೆಲ್ಲರಂ ಗೆಲಿದು ಬಂದಾ ಪೆಣ್ಣ ಕೊಂಡೋಡಿದಂ
ತಲೆಯೊಳ್ ಕಾದಿದರೂರ್ಗಳಂ ಪಡೆದರೆಲ್ಲಾ ಗೆಲ್ದು ತಾವಾಳ್ದರೇಂ
ಬಲುಗರ್ವಂ ಕೊಲದಿರ್ಪುದೇ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೪೯ ॥

ಸುರೆಯಂ ಸೇವಿಸಿದಾತ ಬಲ್ಲನೆ ಮಹಾಯೋಗೀಂದ್ರರೆಂಬುದಂ
ದೊರೆಯೊಳ್ ತೇಜವನಾಂತವಂ ಬಡವರಂ ತಾಂ ನೋಳ್ಪನೇ ಕಂಗಳಿಂ
ಪಿರಿಯರ್ ಮಾನವರೆಂದು ಕಾಣ್ಬನೆ ಮಹಾದುರ್ಮಾರ್ಗಿಯೆಂತಾದೊಡಂ
ದುರುಳಂ ಬಲ್ಲನೆ ಬಾಳ್ವರಂ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೫೦ ॥

ಪಿಡಿಯಲ್ ಸಿಂಗವ ಮತ್ಸರ ಕವಿವುದಾ ದುರ್ಗಂಧಮೇ ಗಾಳಿಯೊಳ್
ತೊಡೆಯಲ್ ನಾರದೆ ನಾಯ ಬಾಲ ಸೆಡೆಯಂ ಕಟ್ಟಲ್ಕೆ ಚಂದಪ್ಪುದೇ
ಸುಡುಚೇಳಂ ತೆಗೆಯಲ್ಕೆ ಸುಮ್ಮನಿಹುದೇನೇನೆಂದೊಡೆಯೆಷ್ಟಾದೊಡಂ
ಬಿಡ ತನ್ನಂಗವ ನೀಚ ತಾಂ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೫೧ ॥

ಬಡಿಗೋಲಂ ಸಮಮಾಡಬಕ್ಕು ಧರೆಯೊಳ್ ಕೂಪಂಗಳಂ ತೋಡಬ
ಕ್ಕಿಡಿದುಕ್ಕಂ ಮೃದುಮಾಡಬಕ್ಕು ಮಳಲೊಳ್ ತೈಲಂಗಳಂ ತೋರಬ
ಕ್ಕಡವೀ ಸಿಂಗವ ತಿದ್ದಬಕ್ಕು ಕರೆಯಲ್ಬಕ್ಕುಗ್ರದ ವ್ಯಾಘ್ರಮಂ

ಕಡುಮೂರ್ಖಂ ನೆಱೆ ಕೇಳನೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೫೨ ॥

ತೊನೆವರ್ ಮಾತಿಗೆ ಸೋಲ್ದು ತನ್ನ ತಲೆಯೊಳ್ ತಾನಿಟ್ಟು ಬೊಬ್ಬಿಟ್ಟು ಕೈ–
ಪನೆ ಬಿಟ್ಟೆಲ್ಲರ ಮುಂದೆ ತೋಳ ನೆಗಪುತ್ತಂ ಕೋತಿಯಂತೇಡಿಸು–
ತ್ತಿನಿಸುಂ ಹೇಸದೆ ಲಜ್ಜೆಯಿಲ್ಲದನಿಬರ್ ತಾಂ ಮಾನ್ಯನೆಂದಾ
ಮನುಜಂ ಸದ್ಗತಿ ಕಾಣನೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೫೩ ॥

ಘನದೈನ್ಯಂಬಡುವರ್ ಗಭೀರಗೆಡುವರ್ ಗ್ರಾಸಕ್ಕೆ ಕುಗ್ರಾಮವಾ–
ಗನುಗೆಟ್ಟಿರ್ಪರು ಆ ಕ್ಷಣಕ್ಕೆ ಕೆಲವರ್ ಮಾತಾಡಲುಂ ಬಿ–
ಜ್ರನೆ ಬಾಗರ್ ತಲೆಗೇರಿ ಸೊಕ್ಕು ತೊನೆವರ್ ತಾವೆಲ್ಲರಂ ನಿಂದಪರ್
ಮನುಜರ್ಗೆತ್ತಣ ನೀತಿಯೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೫೪ ॥

ಅಗಲರ್ ಸೂಳೆಯನಾಳರಾ ಕುಲಜೆಯಂ ಸಂಕೀರ್ಣಮಂ ಮಾಳ್ಪರಾ–
ವಗ ದುರ್ಗೋಷ್ಠಿಯೊಳಿರ್ಪರೇಳು ಬೆಸನಕ್ಕೀಡಪ್ಪರಾಚಾರಮಂ
ಬಗೆಯರ್ ಸ್ವಾತ್ಮವಿಚಾರವಿಲ್ಲ ಮತಿಗೀಯರ್ ಧರ್ಮಮಂ ಪಾಲಿಸರ್
ಯುಗಧರ್ಮಂ ನರರ್ಗಪ್ಪುದೆ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೫೫ ॥

ಕುಲದೊಳ್ ಕೂಡರು ಕೂಸನೀಯರು ನೃಪರ್ ನಿಷ್ಕಾರಣಂ ದಂಡಿಪರ್
ಪೊಳಲೊಳ್ ಸೇರಲು ಪೋರುಗೈದು ಸತಿ ತಾಂ ಪೋಗಟ್ಟುವಳ್ ಸಾಲಿಗರ್
ಕಲುಗುಂಡಂ ತಲೆಗೇಱಿಪರ್ ತೊಲಗಿರಲ್ ಲಕ್ಷ್ಮೀಕಟಾಕ್ಷೇಷಣಂ
ನೆಲ ಮುಟ್ಟಲ್ ಮುನಿದಪ್ಪುದೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೫೬
॥

ಮಡೆಯಂಗುತ್ತಮವಿದ್ಯೆ ಬೆಟ್ಟ ಕುರುಡಂಗಂ ಮಾರ್ಗವೇ ಬೆಟ್ಟ ಂಕೇಳ್ಂ
ಬಡವಂಗೊಂದಿನ ಘಟ್ಟ ಬೆಟ್ಟ ಜಡದೇಹಂಗುಜ್ಜುಗಂ ಬೆಟ್ಟ ಮು–
ಪ್ಪಡಿಸಿರ್ದಾತಗೆ ಪೆಣ್ಣು ಬೆಟ್ಟ ರುಣವೇ ಪೆರ್ಬೆಟ್ಟ ಮೂಲೋಕದೊಳ್
ಕಡುಲೋಭಂಗಣು ಬೆಟ್ಟವೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೫೭ ॥

ತೊನೆಯಲ್ ತಾಳ್ಮೆಯನಾಂತವಂ ಬೆರೆತೊಡಾತಂ ಗರ್ವಿ ಕೈಮಾಡಲಾ
ತನೆ ಸತ್ಯವ್ರತಿ ಸೂರುಳಿಟ್ಟು ಪುಸಿಯಲ್ ಭಾಷಾ ಪ್ರತೀಪಾಲಕಂ
ಕನಲಲ್ ಸ್ವೈರಣೆವಂತ[೧]ನುದ್ಗುಣಯುತಂ ತಾಂ[೧] ನಿರ್ಗುಣಂತೋಱಲಾ
ಧನಿಕಂ ಸತ್ಕುಲಜಾತನೈ ಹರಹರ ಶ್ರೀ ಚೆನ್ನಸೋಮೇಶ್ವರಾ
॥ ೫೮ ॥

ಕರೆಯಲ್ ಕರ್ಣಗಳಿರ್ದು ಕೇಳರು ಕರಂಗಳ್ ಚೆಲ್ವನಾಂತಿರ್ದೊಡಂ
ಮುರಿದಂತಿರ್ಪರ ಮೇಲೆ ಹೇೞೆ ನಡೆವರ್ ಮಾತಿರ್ದೊಡಂ ಮೂಕರ–
ಪ್ಪರು ಕಾಲಿರ್ದೊಡೆ ಕಾಕರಲ್ಪರಿಡೆ ಕಾಲಂ ಪೂರ್ವಪುಣ್ಯಂಗಳಿಂ
ಸಿರಿ[೨]ಪೊರ್ದಲ್[೨] ನೆರೆಗಾಣರೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೫೯ ॥

ಕೊಡಬೇಕುತ್ತಮನಾದವಂಗೆ ಮಗಳಂ ಸತ್ಪಾತ್ರಕಂ ದಾನಮಂ
ಇಡಬೇಕೀಶ್ವರನಲ್ಲಿ ಭಕ್ತಿರಸಮಂ ವಿಶ್ವಾಸಮಂ ಸ್ವಾಮಿಯೊಳ್
ಬಿಡಬೇಕೈ ಧನಲೋಭ ಬಂಧುಜನರೊಳ್ ದುಷ್ಟಾತ್ಮರೊಳ್ ಗೋಷ್ಠಿಯಂ
ಇಡಬೇಕಿದ್ದುಣಬೇಕೆಲೈ ಹರಹರ ಶ್ರೀ ಚೆನ್ನಸೋಮೇಶ್ವರಾ
॥ ೬೦ ॥

ವರವಿದ್ವಾಂಸ ಕವೀಂದ್ರ ಗಾಯಕ ಪುರಾಣಜ್ಞರ್ ಮಹಾಪಾಠಕರ್
ಪರಿಹಾಸೋಚಿತಿತಿಹಾಸ ಮಂತ್ರಶಕುನಜ್ಞರ್ ವಾಗ್ಮಿಗಳ್ ವೇಶಿಯರ್
[೩]ಶರ[೩]ಶಸ್ತ್ರಾದಿ ಸಮಸ್ತ ವಿದ್ಯೆಯಱಿದರ್ ಕಾಲಾಳು ಮೇಲಾಳಿರಲ್
ದೊರೆಯೊಡ್ಡೋಲಗ ಚೆಲ್ವುದೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೬೧ ॥

ಬಲವಂತರ್ [೪]ನೆರವಾಗಲಿಕ್ಕೆಲದವರ್ ಮಿತ್ರತ್ವಮಂ ತಾಳ್ದಿರಲ್[೪]
ನೆಲನೆಲ್ಲಂ ಬೆಸಲಾಗೆ ಧಾನ್ಯತತಿಯಂ ನಿಷ್ಕಾರಣಂ ದಂಡಮಂ
ಕೊಳದೆಲ್ಲರ್ ಸೊಗವಾಗೆ ನಂಬುಗೆಗಪೋಹಂ ಬಾರದಾಳಲ್ ನಿಜಂ
ಬಲುಭಾಗ್ಯಂ ದೊರೆಗಪ್ಪುದೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೬೨ ॥

ಚಪಳರ್ ಚೋರರು ಚಾಟುಗರ್ ಚರೆಯರಲ್ಪರ್ ಚೇಟಿಯರ್ ವೇಶಿಯರ್
ಕಪಟೋಪಾಯರು ಕುಂಟಸಾಕ್ಷಿಕುಜನರ್ ಕೊಂಡಾಡುವರ್ ಕೊಂಡೆಯರ್
ಅಪನಿಂದಾನ್ವಿತರಾತ್ಮಬೋಧ ಕುಹಕರ್ ಸಾಮೀಪ್ಯಮಾತ್ರೇಷ್ಟರುಂ
ನೃಪರೊಳ್ ಮಾನ್ಯರೆನಿಪ್ಪರೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೬೩ ॥

ಧುರದೊಳ್ ತನ್ನಯ ವೀರರೊಳ್ ಪ್ರಜೆಗಳೊಳ್ ದಾಯಾದ್ಯರೊಳ್ ಭೃತ್ಯರೊಳ್
ಪುರದೊಳ್ ಬಂಧುಗಳೊಳ್ ಸುಭೋಜನಗಳೊಳ್ ವೈದ್ಯಂಗಳೊಳ್
ಸಂಗದೊಳ್
ಅರಿಯೊಳ್ ಜೋತಿಷಮಂತ್ರವಾದದೆಡೆಯೊಳ್ ವಿದ್ವಾಂಸರೊಳ್ ತತ್‌ಕ್ಷಣಂ
ಅರಸಂಗೆಚ್ಚರು ಬೇಕೆಲ್ಲೈ ಹರಹರಾ ಶ್ರೀ ಚೆನ್ನಸೋಮೇಶ್ವರಾ
॥ ೬೪ ॥

ಶಿವಸುಜ್ಞಾನವೆ ಯೋಗಿಗಳ್ಗೆ ನಯನಂ ಚಂಡಾಂಶು ಶುಭ್ರಾಂಶುಗಳ್
ಭವನೇತ್ರಂ ವಿಷ್ಣುವಿಂಗಂಬುಜದಳನಯನಂ ರಾತ್ರಿಗಾ ವಹ್ನಿಃ
ರವಿ ಲೋಕತ್ರಯಕೆಲ್ಲ ಲೋಚನ ಬುಧವ್ರಾತಕ್ಕೆ ಶಾಸ್ತ್ರಾಂಬಕಂ
ಕಿವಿಯೇ ರಾಜರ ಕಣ್ಣೆಲ್ಲೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೬೫ ॥

ಬರೆ ದಾರಿದ್ರ್ಯದಿ ದ್ರೋಣನಂ ದ್ರುಪದ ಪೂರ್ವಸ್ನೇಹದಿಂ ಕಂಡನೇ
ಕುರುಭೂಪಾಲನು ಪಾಂಡುಪುತ್ರರು ಮಹಾಧರ್ಮಾತ್ಮರೆಂದಿತ್ತನೇ
ಹರಿಯಂ ತಂಗಿಯ ಬಾಲನೆಂದು ‘ಬಗೆದೇಂ ಕಂಸಾಸುರಂ’ ಕಂಡನೇ
ದೊರೆಗಳ್ಗೆತ್ತಣ ನಂಟರೈ ಹರಹರಾ ಶ್ರೀ ಚೆನ್ನಸೋಮೇಶ್ವರಾ
॥ ೬೬ ॥

ಚಿಗುರೆಂದುಂ ಮೆಲೆ ಬೇವು ಸ್ವಾದವಹುದೇ ಚೇಳ್ ಚಿಕ್ಕದೆಂದಳ್ಕರಿಂ
ತೆಗೆಯಲ್ ಕಚ್ಚದೆ ಪಾಲನೂಡಿ ಫಣಿಯಂ ಸಾಕಲ್ಕೆ ವಿಶ್ವಾಸಿಯೇ
ಖಗಮಂ ಸಾಕುವೆನೆಂದು ಗೂಗೆಮರಿಯಂ ಸಂಪ್ರೀತಿಯಿಂದೋವರೇ
ಪಗೆಯಂ ಬಾಲಕನೆಂಬರೇ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೬೭ ॥

ಪುರದುರ್ಗಂಗಳ ಬಲ್ಮೆ ಮಾಡದೆ ಪ್ರಜಾಕ್ಷೋಭಂಗಳಂ ನೋಡದೆ-
ಲ್ಲರು ವಿಶ್ವಾಸಿಗಳೆಂದು ನಂಬಿ ಬಹುದಂ ಪೋದಪ್ಪುದಂ ಕಾಣದಾ-
ತುರದಿಂದುಂಡತಿ ನಿದ್ರೆಗೈದು ಮದನಂಗಾಳಾಗಿಹಂ ಲೋಕದೊಳ್
ದೊರೆಯೇ ಸೊಕ್ಕಿದ ಕೋಣನೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೬೮ ॥

ಧುರಧೀರರ್ಗರೆಗಂಜಿ ಹೇಡಿಗತಿ ಪಂಕ್ತಿಭೋಜನಂ ಕೀರ್ತಿಯಂ
ಧರೆಯೊಳ್ ಬಿತ್ತುವ ಗಡ್ಡದುಡ್ಡು ಜರೆವರ್ಗಿಷ್ಟಾರ್ಥದಾನಂಗಳುಂ
ಅರೆಮೈವೆಣ್ಗರೆ ಭೋಗಮೆಲ್ಲ ಸೊಗಮುಂ ವೇಶ್ಯಾಜನಕ್ಕೀಕ್ಷಿಸಲ್
ದೊರೆಗಳ್ಗೆತ್ತಣ ನೀತಿಯೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೬೯ ॥

ಅತಿಗಂಭೀರನುದಾರಧೀರನು ಮಹಾಸಂಪನ್ನ ಸದ್ವರ್ತನೂ-
ರ್ಜಿತ ನಾನಾಲಿಪಿಭಾಷೆಯೊಳ್ ಪರಿಚಿತಂ ಲಂಚಕ್ಕೆ ಕೈನೀಡದಂ
ವ್ರತಿ ಸದ್ಧರ್ಮವಿಚಾರಶಾಲಿ ಚತುರೋಪಾಯಂಗಳಂ ಬಲ್ಲವಂ
ಪತಿಕಾರ್ಯಂ ಪ್ರತಿಮಂತ್ರಿಯೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೭೦ ॥

ಒಡೆಯಂಗುತ್ಸವಮಾಗೆ ಸರ್ವಜನಮಾನಂದಂಬಡಲ್ ರಾಜ್ಯದೊಳ್
ಕೊಡದೊಳ್ ತುಂಬಿರೆ ಜೇನು ನಿಚ್ಚ ಫಲಪೈರಿಂಗುರ್ವಿಯಿಂಬಾಗಿರಲ್
ಗಡಿದುರ್ಗಂಗಳು ಭದ್ರಮಾಗೆ ಧನಧಾನ್ಯಂ ತೀವೆ ಭಂಡಾರದೊಳ್
ನಡೆವಂ ಮಂತ್ರಿವರೇಣ್ಯನೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೭೧ ॥

ಇಳೆ[೧]ಯಾಂಕಂ ತನಗಲ್ತೆ[೧] ವೆಗ್ಗಳನೆನುತ್ತಂ ಪಾರುಪತ್ಯಂಗಳಂ
ಖಳ[೨]ಗೀಯಲ್ ಸುಲಿ[೨]ತಿಂದು ರಾಜ್ಯವನಿತಂ ನೀವೇಕೆ ತಾವೇತಕೆಂ-
ದುಳಿದರ್ಗೀಯದೆ [೩]ಜೀತಮಂ ಕಪಿಯ ಮುಷ್ಟೀ[೩] ಮಾಡಿ ಕೂಗುತ್ತಿಹಂ
ದಳವಾಯೇ ತಳವಾಯೆಲೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೭೨ ॥

ಅಣುಮಾತ್ರಂ ನದರಿಲ್ಲದಾಣ್ಮನೆಡೆಯೊಳ್ ಲಂಚಕ್ಕೊಡಂಬಟ್ಟು [೪]ಮಾ-
ರ್ಪಣಮಂ ಕೊಂಡತಿವಿತ್ತಮಂ[೪] ಕೆಡಿಸಿ ಚಾಡೀ ಕೇಳಿ ದ್ರೋಹಂಗಳಂ

ಎಣಿಸುತ್ತೆಲ್ಲರ ಬಾಳ್ಗೆ ನೀರನೆಱೆದಾರುಂ ಕಾಣದೇ ಭಕ್ಷಿಪಾ
ಗಣಕಂ ಹೆಗ್ಗಣಕಂ ಸಮಂ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೭೩ ॥

ಬಹುಳೋಪಾಯದೊಳಾರ್ಜಿಸುತ್ತೆ ಧನಮಂ ತನ್ನಾಳ್ದನಂ ದೈವವೆಂ–
ದಹಿತರ್ ತನ್ನವರನ್ಯರೆನ್ನದಣುಮಾತ್ರಂ ಪೋಗದೋಲ್ ತ್ರಾಸಿನಂ–
ತಿಹನೊಕ್ಕಲ್ಗತಿ ಪ್ರೀತಿಪಾತ್ರನಿಳೆಮೆಚ್ಚಲ್ ಶಾನಭಾಗಾಖ್ಯನೀ
ಮಹಿವಾರಣಾಸಿ ತಪ್ಪದೈ ಹರಹರಾ ಶ್ರೀ ಚೆನ್ನಸೋಮೇಶ್ವರಾ
॥ ೭೪ ॥

ಕಳವಂ ಕೊಂಡವನೈದೆ ಹೆಜ್ಜೆವಿಡಿದಾ ಮರ್ಮಂಗಳಂ ನೋಡದೇ
ಪೊಳಲೊಳ್ ಪೊಕ್ಕರ ಪೋದರಂ ನುಡಿವಮಾತಂ ಕೇಳದೇ ಕಾಣದೇ
ಪಳಿವನ್ಯಾಯವ ನೋಡದನ್ಯರೊಳೆ ದೂರಿಟ್ಟೆಲ್ಲರಂ ಬಾಧಿಪಾ
ತಳವಾರಂ ಬೆಳವಾರನೈ ಹರಹರಾ ಶ್ರೀ ಚೆನ್ನಸೋಮೇಶ್ವರಾ
॥ ೭೫ ॥

ಪರರಾಯರ್ಕಳ ಸೇನೆಯಂ ಗೆಲಿದು ಮತ್ತೇಭಂಗಳಂ ಸೀಳ್ದು ತ–
ನ್ನರಿಯೆಂದೆಂಬರನೊಕ್ಕಲಿಕ್ಕುವ ಭಟರ್ಗಂಗಂಜಿ ಕೀಳ್ನಾಯ್ಗಳ್ಗಂ
ನಿರುತಂ ಸಕ್ಕರೆ ಪಾಲನಿತ್ತು ಪೊರೆವರ್ ಮಾನಂಗಳೆಲ್ಲಿರ್ಪುವೈ
ಪರಪೋಷ್ಯಕ್ಕೊಳಗಾಗಿರಲ್ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೭೬ ॥

ಹರ ತಾಂ ಕುಂಟಣಿಯಾಗೆ ನಂಬಿ ಜಱೆದಂ ಚಂದ್ರಾವತೀದೇವಿಗಂ
ಕರಕಷ್ಟಂಗಳ ಮಾಡಿದಂ ದ್ವಿಜ ವಿರಾಟಂ ಧರ್ಮಭೂಪಾಲನಂ
ಶಿರಮಂ ಚಿಟ್ಟೆಯೊಳಿಟ್ಟನಗ್ನಿಜೆಗೆ ಬಂದಾಪತ್ತನೆಂತೆಂಬೆನಾಂ
ಪರಸೇವಾ ಕರಕಷ್ಟವೈ ಹರಹರಾ ಶ್ರೀ ಚೆನ್ನಸೋಮೇಶ್ವರಾ
॥ ೭೭ ॥

ತ್ರಿಜಗಾಧೀಶ್ವರನೊಳ್ ಮನೋಜಕಲಹಕ್ಕಾಂತಗ್ನಿಗೀಡಾದ ವಾ–
ರಿಜನಾಭಂಗಿದಿರಾಂತು ಬಾಣ ಭುಜಸಾಹಸ್ರಂಗಳಂ ನೀಗಿದಂ

ದ್ವಿಜರಾಜಂಗೇಣೆವಂದು ಚಕ್ರಹತಿಯಿಂ ಸ್ವರ್ಭಾನು ತುಂಡಾಗನೇ
ಗಜದೊಳ್ ಸುಂಡಗೆ ಯುದ್ಧವೇ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೭೮ ॥

ಮದನಂಗಂಜುವ ಯೋಗಿಯೇ ಮನೆಯ ಪೆಣ್ಣಿಂಗಂಜುವಂ ಗಂಡಸೇ
ಮದಕಂಜೋಡುವುದಾನೆಯೇ ಸುರತದೊಳ್ ಸೋತಂಜುವಳ್ ಸೂಳೆಯೇ
ಬುಧನೇ ತರ್ಕದೊಳಂಜುವಂ ಬೆದಱುಗಾಯಕ್ಕಂಜೆ ದಿವ್ಯಾಶ್ವವೇ
ಕದನಕ್ಕಂಜುವ ವೀರನೇ ಹರಹರಾ ಶ್ರೀ ಚೆನ್ನಸೋಮೇಶ್ವರಾ
॥ ೭೯ ॥

ಇಱಿಯಲ್ಬಲ್ಲೊಡೆ ವೀರನಾಗು ಧರೆಯೊಳ್ ನಾನಾಚಮತ್ಕಾರಮಂ
ಅಱಿಯಲ್ಬಲ್ಲೊಡೆ ಮಂತ್ರಿಯಾಗು ವಿಭುವಾಗಾರೆಂದೊಡಂ ಕೋಪಮಂ
ತೊಱೆಯಲ್ಬಲ್ಲೊಡೆ ಯೋಗಿಯಾಗು ರಿಪುಷಡ್ವರ್ಗಂಗಳಂ ಬಾಧಿಸಲ್
ತೆಱಬಲ್ಲರ್ ಹೊಣೆಯಪ್ಪುದೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೮೦ ॥

ವರಬಿಂಬಾಧರೆಯಾಗಿ ಚಂದ್ರಮುಖಿಯಾಗಂಭೋಜ ಶೋಭಾಕ್ಷಿಯಾ–
ಗೆರವಂ ಮಾಡದಳಾಗಿ ಚಿತ್ತವಱಿದೆಲ್ಲಾ ಬಂಧಮಂ ತೋರ್ಪ ಸೌಂ–
ದರಿಯಾಗುತ್ತಮಜಾತಿಯಾಗಿ ಸೊಗಸಿಂದಂ ಕೂಡುವಳ್ಸರತಾ೨
ಸುರತಕ್ಕಿಂದತಿ ಸೌಖ್ಯಮೇ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೮೧ ॥
ಕ್ಷಿತಿಯಂ ಶೋಧಿಸಲಕ್ಕು ವೀಚಿಗಳ ಲೆಕ್ಕಂ ಮಾಡಲಕ್ಕಾಗಸೋ–
ನ್ನತಿಯಂ ಕಾಣಲಿಬಕ್ಕು ಸಾಗರಗಳೇಳಂ ದಾಂಟಲಕ್ಕು ನಭೋ–
ಗತಿಯಂ ಸಾಧಿಸಲಕ್ಕು ಬೆಟ್ಟಗಳ ಚೂರ್ಣಂ ಮಾಡಲಕ್ಕೀಕ್ಷಿಸಲ್
ಸತಿಯಾ ಚಿತ್ತವಭೇದ್ಯವೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೮೨ ॥

ಹಣಮುಳ್ಳಂ ಹೆಣನಾದೊಡಂ ಮಮತೆಯಿಂ ತಾನಾವಗಂ ಬಿಟ್ಟಿರಳ್
ಕ್ಷಣಮಾತ್ರಂ ಬಲುಬೂಟಕಂ ಗಳಪಿ ಹರ್ಷೋತ್ಸಾಹದಿಂ ಹಾಲ ಮುಂ–
ದಣ ಬೆಕ್ಕಾಡುವೊಲಾಡಿಕೊಂಡು ಧನಮುಂ ಪೋಗಲ್ಕೆ ಮಾತಾಡಳೈ

ಗಣಿಕಾಸ್ತ್ರೀ ಗುಣಕಿಲ್ಲವೈ ಹರಹರಾ ಶ್ರೀ ಚೆನ್ನಸೋಮೇಶ್ವರಾ
॥ ೮೩ ॥

ಕಡುಮುಪ್ಪಾಗಿರೆ ಕುಂಟನಾಗೆ ಕುರುಡಂ ತಾನಾಗೆಯೆತ್ತೇಱಿದಾ
ಮುಡಬಂ ಮೂಕೊಱೆ ಮೊಂಡ ಲಂಡ ಕಿವುಡಂ ಚಂಡಾಲ ತಾನಾದೊಡಂ
ಸುಡುಮೈ ಕುಷ್ಠಶರೀರಿಯಾಗಲೊಲಿವರ್ ಪೊನ್ನಿತ್ತಗಂ ಸೂಳೆಯರ್
ಕೊಡುಗೈ ವೇಶೆಯ ವಶ್ಯವೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೮೪ ॥

ಕೊಱಚಾಡೆಲ್ಲರ ಮುಂದೆ ರಚ್ಚೆಗೆಲೆಯುತ್ತಂ ಕಿತ್ತು ಮೈಯೆಲ್ಲವಂ
ಹಱಿತಿಂದುಳ್ಳ ಸುವಸ್ತುವಂ ಕಡೆಯೊಳೊರ್ವ೯ಂಗಿತ್ತು ತಾಂ ಭಾಷೆಯ
ಬಱಿಗಂಟಿಕ್ಕುವನೆಂದು ತಾಯ ಹೊಸೆಬಿಟ್ಟೆಬ್ಬಟ್ಟಿ ಕೊಂಡಾಡುತಂ
ತಿಱಿವಳ್ ತಾಂ ನೆಱೆ ಸೂಳೆಯೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೮೫ ॥

ಮಹಿಯೊಳ್ ಭೂಸುರವೇಷದಿಂದ ಕಲಿಯಲ್ ಕರ್ಣಂ ಧನುರ್ವೇದಮಂ
ರಹಿಗೆಟ್ಟಂ ಬಲುನೊಂದನಿಲ್ವಲ ಮಹಾವಾತಾಪಿಯೊಳ್ ಶುಕ್ರನಿಂ
ದಹಿರಾಜಾತ್ಮಜೆ ಮಂತ್ರತಂತ್ರವಱಿದಾಣ್ಮಂ ಪೋಗೆ ತಾಂ ತಂದಳೇ
ಬಹುವಿದ್ವಾಂಸಗೆ ಭ್ರಾಂತಿಯೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೮೬ ॥

ಕಪಿಯಂ ಗಾಣಿಗ ಹಾವು ಕಾಷ್ಠ ಜಿನ ತಕ್ರ ತೈಲಸಿಕ್ತಂ ನಿರೋ–
ಧಿಪನೊರ್ವ೯ಂ ದ್ವಿಜ ಮುಕ್ತಕೇಶಿ ಜಟರಕ್ತಂ ರಿಕ್ತಕುಂಭಂ ವಿರಾ–
ಜಿಪ ಕಿನ್ನಾಂಗನೆ ಕುಷ್ಠನಂ ವಿಧವೆಯಂ ಕೊಂದಾಟಮಂ ಧೂಮಮಂ
''ನಿಪುಣರ್'' ಕಂಡರೆ ಪೋಗರೈ ಹರಹರಾ ಶ್ರೀ ಚೆನ್ನಸೋಮೇಶ್ವರಾ॥ ೮೭ ॥

ಶುಕ ಶಂಖಂ ಗಜ ವಾಜಿ ವೀಣೆ ಪಶು ತಾಳಂ ಭೇರಿ ಶೋಭಾನ ಪಾ
ಠಕ ನೃತ್ಯಾದಿ ವರಾಂಗನಾ ತಳಿರುಗಳ್ ಪೂವಣ್ಣು ವಿಪ್ರದ್ವಯಂ
ಮುಕುರಂ ಮಾಂಸವು ಮದ್ಯತುಂಬಿದ ಕೊಡಂ ಪೆರ್ಗಿ೯ಚ್ಚನಾರ್ ಕಂಡೊಡಂ
ಶಕುನಂ ಶೋಭನಕಾಸ್ಪದಂ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೮೮ ॥

ಹಣಮಂ ನೇತ್ರರನೇಣಕೋಣಕುಱಿಯಂ ಹಾರಾಯುಧಂ ಬೀಳ್ವುದಂ
ಕುಣಬಂ ಲುಬ್ಧಕನಂ ವಿಕಾರತನುವಂ ಮೇವಾಡನುಂ ಪತ್ತುವಂ–
ದಣಮಂ ಕೆಂಪಿನ ಪೂವನೆಣ್ಣೆದಲೆ ನೂತ್ನಾಗಾರಮಂ ದೈತ್ಯರಂ
ಕನಸೊಳ್ ಕಾಣಲುಬಾರದೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೮೯ ॥

ಕೊಳನಂ ತಾವರೆಯಂ ತಳಿರ್ತ ವನಮಂ ಪೂದೋಟಮಂ ವಾಜಿಯಂ
ಗಿಳಿಯಂ ಬಾಲಮರಾಳನಂ ಬಸವನಂ ಬೆಳ್ಳಕ್ಕಿಯಂ ಛತ್ರಮಂ
ತಳಿರಂ ಪೂರ್ಣತಟಾಕಮಂ ^ಭುಜಗನಂ^ ದೇವರ್ಕಳಂ ತುಂಬಿಯಂ
ತಿಳಿಯಲ್ ಸ್ವಪ್ನದಿ ಲೇಸೆಲೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೯೦ ॥

ಪಶುಗಳ್ ಕ್ರೂರಮೃಗಂಗಳಂಡಜಗಳುಂ ಸರ್ಪಂಗಳುಂ ಕಣ್ಗೆ ಕಾ–
ಣಿಸಿದತ್ಯುಗ್ರಗ್ರಹಂಗಳುಂ ಪಟುಭಟರ್ ವಿದ್ವಜ್ಜನರ್ ಮಂತ್ರಿಗಳ್
ಋಷಿಗಳ್ ಮಿತ್ರರು ಬಂಧುಗಳ್ ಪ್ರಜೆಗಳುಂ ತಾವೆಲ್ಲರುಂ ತಮ್ಮಯಾ
ಶಿಶುವಂ ಪಾಲಿಸದಿರ್ಪರೇ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೯೧ ॥

ರಣದೊಳ್ ಶಕ್ರನ ತೇರನೇಱಿದ ಮಹಾಶೈಲಾಳಿ ಬೆಂಬತ್ತೆ ಮಾ–
ರ್ಗಣದಿಂ ಚಿಮ್ಮಿದ ಸಪ್ತಸಾಗರಗಳಂ ದಿಕ್ಕೆಂಟು ಮೂಲೋಕಮಂ
ಕ್ಷಣದೊಳ್ ವೆಚ್ಚವ ಮಾಡಿ ಬೇಡೆ ಬಲಿ ಸಾಲಕ್ಕಂಜಿ ಬಿಟ್ಟೋಡಿದಂ
ಋಣಭಾರಕ್ಕೆಣೆಯಾವುದೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೯೨ ॥

ಅಡಿಮೂಱೀಯೆನಲೀಯನೆ ಬಲಿನೃಪಂ ಮೂಲೋಕಮಂ ಖಂಡಮಂ
ಕಡಿದೀಯೆಂದೆನೆ ಪಕ್ಕಿಗೀಯನೆ ನೃಪಂ ತನ್ನಂಗದಾದ್ಯಂತಮಂ
ಮೃಡ ಬೇಕೆಂದೆನೆ ಸೀಳ್ದು ತನ್ನ ಸುತನಂ ನೈವೇದ್ಯಮಂ ಮಾಡನೇ
ಕೊಡುವರ್ಗಾವುದು ದೊಡ್ಡಿತೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೯೩ ॥

ಹೊಱಬೇಡಂಗಡಿ ಸಾಲವೂರ ಹೊಣೆಯಂ ಪಾಪಂಗಳಂ ನಿಂದೆಯಂ
ಮಱಬೇಡಾತ್ಮಜ ಸತ್ಕಳತ್ರಸಖರೊಳ್ ನ್ಯಾಯಂಗಳೊಳ್ ಸತ್ಯದೊಳ್
ಸೆಱಬೇಡಂಗನೆ ಪಕ್ಷಿವೃದ್ಧತರುಣರ್ ಗೋವಿಪ್ರದಾರಿದ್ರರೊಳ್

ತೆಱಬೇಡೊತ್ತೆಗೆ ಬಡ್ಡಿಯಂ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೯೪ ॥

ಅನುಮಾನಂಬಡೆ ರಾಮ^ನಗ್ನಿಯೊಳೆ ಪೊಕ್ಕಾ ಸೀತೆ ತಾನ್ಯೆತರಲ್^
ವನದೊಳ್ ನೇಱಿಲವಣ್ಣನಗ್ನಿಜೆ ಮಹಾವಿಖ್ಯಾತಿಯಿಂ ಪತ್ತಿಸಲ್
ದನುಜಾರಾತಿ ಸ್ಯಮಂತರತ್ನವ ನೃಪಂಗೀಯಲ್ ಘನಂ ಪೋದುದೇ
ಜನರಂ ಮೆಚ್ಚಿಸಲಾಗದ್ಯೆ ಹರಹರಾ ಶ್ರೀ ಚೆನ್ನಸೋಮೇಶ್ವರಾ
॥ ೯೫ ॥

ಮದನಂಗೀಶ್ವರ ಶತ್ರು ಬಂಧುನಿಚಯಕ್ಕಂ ಜಾರೆಯೇ ಶತ್ರು ಪೇ–
ಳದ ವಿದ್ಯಂಗಳ ತಂದೆ ಶತ್ರು ಕುವರರ್ಗಂ ಶತ್ರು ಸನ್ಮಾನ್ಯರಾ
ಸದನಕ್ಕಂ ಬಲುಸಾಲ ರೂಪವತಿ ತಾನೇ ಶತ್ರು ಗಂಡಂಗೆ ಮೇಣ್
ಮುದಿಯಂಗೆವ್ವನೆ ಶತ್ರುವ್ಯೆ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೯೬ ॥

ಪೃಥುರೋಮೇಶ ತಿಮಿಂಗಿಲಂ ತಿಮಿಯ ನೂಂಕಲ್ ಸಿಂಧು ತಾನುಕ್ಕದೇ
ಶಿಥಿಲತ್ವಂಬಡೆದಿರ್ಪ ವಂಶ ಮೊಱೆಯಲ್ ಕಿಚ್ಚೇಳದೇ ಮಂದರಂ
ಮಥಿಸಲ್ ಕ್ಷೀರಸಮುದ್ರದೊಳ್ ಬಹುವಿಷಂ ತಾಂ ಪುಟ್ಟದೇ ಮರ್ತ್ಯರೊಳ್
ಮಥನಂ ವೆಗ್ಗಳವಲ್ಲವ್ಯೆ ಹರಹರಾ ಶ್ರೀ ಚೆನ್ನಸೋಮೇಶ್ವರಾ
॥ ೯೭ ॥

ಹರಿಯೊಳ್ ನಾರದ ಮಂದೆವಾಳದಿ ಮಹಾಶಾಪಂಗಳಂ ತಾಳನೇ
ಸುರವೆಣ್ಣಿಂದಲಿ ಪುಷ್ಪದತ್ತವನದೊಳ್ ತಾಂ ಕ್ರೋಡರೂಪಾಗನೇ
ವಿರಸಂ ಬರ್ಪುದು ಬೇಡೆನಲ್ ದ್ರುಪಜೆಯಿಂ ಭೀಮಾರಿ ತಾ ನೋಯನೇ
ಸರಸಂ ವೆಗ್ಗಳ ಹೊಲ್ಲದ್ಯೆ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೯೮ ॥

ಅಱೆಯಂ ಸೀಳುವೊಡಾನೆ ಮೆಟ್ಟಲಹುದೇ ಚಾಣಂಗಳಿಂದಲ್ಲದೇ
ಕಿಱಿದಾಗಿರ್ದೊಡದೇನುಪಾಯಪರನೊರ್ವಂ ಕೋಟಿಗೀಡಕ್ಕು ಹೆ–
ಮ್ಮರನಿರ್ದೇನದಱಿಂದಲೆತ್ತಬಹುದೇ ಬಲ್ಭಾರಮಂ ಸನ್ನೆ ಸಾ–
ವಿರ ಕಾಲಾಳಿನ ಸತ್ವವ್ಯೆ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೯೯ ॥

ಸುಚರಿತ್ರರ್ ಸಲೆ ಕೀರ್ತಿಗೋಸುಗ ಮಹಾಯತ್ನಂಗಳಿಂ ಕೇಳಿಸೂ
ರಿಚಯಕ್ಕಾದರದಿಂದೆ ಮಾನಗಳನಿತ್ತಾಚಂದ್ರ ತಾರಾರ್ಕಮಾ
ದಚಲಖ್ಯಾತಿಯನಾಳ್ದರೀಗಲಿಳೆಯೊಳ್ ತಾವೀಯರ್ಯೆ ಪೋಗಲಾ
ವಚನಕ್ಕೇನು ದರಿದ್ರವ್ಯೆ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೧೦೦ ॥

ಹಿಡಿಯೊಳ್ ತುಂಬಿರೆ ಪಂಕ ಮೇಲುದೊಳೆಯಲ್ ತಾಂ ಶುದ್ಧಮೇನಪ್ಪುದೇ
ಕಡುಪಾಪಂ ಬಲುಮೀಯಲಾತ ಶುಚಿಯೇ ಕಾಕಾಳಿಯೇಂ ಮೀಯದೇ
ಗುಡಪಾನಂಗಳೊಳದ್ದೆ ಕೈಸೊರೆ ತಾಂ ಸ್ವಾದಪ್ಪುದೇ ಲೋಕದೊಳ್
ಮಡಿಯೇ ನಿರ್ಮಲ ಚಿತ್ತವ್ಯೆ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೧೦೧ ॥

ರಚನಂಗೆಯ್ಯದೆ ಧರ್ಮಕೀರ್ತಿಯೆರಡಂ ಸದ್ಧರ್ಮಮಂ ಪಾರದಾ
ನಿಚಯಕ್ಕಿಕ್ಕದೆ ತತ್ವ ಕೇಳಿ ಜಗಮೆಲ್ಲಂ ಬೊಮ್ಮವೆಂದೆನ್ನದೇ
ಉಚಿತಾಲೋಚನೆಯಿಂದೆ ತನ್ನ ನಿಜವಂ ತಾಂ ಕಾಣದೇ ವಾದಿಪಾ
ವಚನಬ್ರಹ್ಮದೆ ಮುಕ್ತಿಯೇ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೧೦೨ ॥

ಸಚರಸ್ಥಾವರಕೆಲ್ಲ ಸರ್ವಸುಖದುಃಖಂಗಳ್ ಸಮಾನಂಗಳೆಂ–
ದಚಲಾನಂದದಿ ತನ್ನೊಳನ್ಯರೆಣಿಸಲ್ ಸುಜ್ಞಾನಿಗಳ್ ಕಿಚ್ಚಿನೊಳ್
ಶುಚಿಯೊಳ್ ಪಾದವನಿಟ್ಟು ತೋರ್ಪತೆಱದೊಳ್ ತಾನಾಗದೇ ವಾದಿಪಾ
ವಚನಬ್ರಹ್ಮದೆ ಮುಕ್ತಿಯೇ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೧೦೩ ॥

ಶುಚಿ ತಾನಾಗದೆ ಸರ್ವಶಾಸ್ತ್ರನಿಪುಣಂ ತಾನಾಗದೇ ಕಾಮಮಂ
ಪಚನಂಗೆಯ್ಯದೆ ಕ್ರೋಧಮಂ ಬಿಡದೆ ಲೋಭಚ್ಛೇದಮಂ ಮಾಡದೇ
ರಚನಾಮೋಹವನಗ್ಗಿ ಮಗ್ಗಿ ಮದಮಂ ಮಾತ್ಸರ್ಯಮಂ ನೀಗದೇ
ವಚನಬ್ರಹ್ಮದೆ ಮುಕ್ತಿಯೇ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೧೦೪ ॥

ಪ್ರಚುರಂ ಪತ್ತೊಳಗಾಗೆ ರಂಧ್ರದೊಳಗಿಲ್ಲಾದೆಂಟನೀಗೇಳಬಿ–
ಟ್ಟುಚಿತಂ ತಾನೆನಿಪಾಱ ಕಟ್ಟುತಯಿದಕ್ಕೀಡಾಗದೇ ನಾಲ್ವರಂ
ರಚನಂಗೆಯ್ಯದೆ ಮೂಱ ನಂಬದೆರಡಂ ಬಿಟ್ಟೊಂದರೊಳ್ ನಿಲ್ಲದಾ
ವಚನಬ್ರಹ್ಮದೇ ಮುಕ್ತಿಯೇ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೧೦೫ ॥

ಮತಿಯಂ ಬುದ್ಧಿಯ ಜಾಣ್ಮೆಯಂ ಗಮಕಮಂ ಗಾಂಭೀರ್ಯಮಂ ನೀತಿಯಾ–
ಯತಮಂ ನಿಶ್ಚಲಚಿತ್ತಮಂ ನೃಪವರಾಸ್ಥಾನೋಚಿತಾರ್ಥಂಗಳಂ
ಅತಿಮಾಧುರ್ಯಸುಭಾಷಿತಂಗಳ ಮಹಾಸತ್ಕೀರ್ತಿಯಂ ವಾರ್ತೆಯಂ
ಶತಕಾರ್ಥಂ ಕೊಡದಿರ್ಪುದೇ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ ೧೦೬ ॥

ಸ್ವಾಮೀ ನನ್ನಿಂದ ನೀನಿಂತೊರೆಯಿಸಿದೆ ಕೃಪಾದೃಷ್ಟಿಯಂ ಬೀಱ ಲೋಕ
ಪ್ರೇಮಂ ತಾಳ್ದಿಂತು ನೀತಿ ಪ್ರಕಟನೆ ಪಡೆ ನಾಲ್ಸಾಸಿರಂ ನಾಲ್ಕುನೂಱುಂ
ಈ ಮಾಯಾಪೂರ್ಣ ಕಲ್ಯಬ್ದದೆ ಗತಿಸಿ ವಿಕಾರ್ಯಬ್ದದಲ್ಲೀಶ್ವರಾ ನಿ–
ನ್ನಾ ಮಾಹಾತ್ಮ್ಯಂಫಿ್ರಗಿತ್ತೆಂ ಪುಲಿಗೆಱ ನಗರೀ ಶಾಸನಾಂಕಾ ಮಹೇಶಾ॥ ೧೦೭ ॥



*

**ನಿಜಲಿಂಗಶತಕ**

*ನಿತ್ಯ ನಿರುಪಮ ವಿಶ್ವಮೂರ್ತಿ ನಿಜಲಿಂಗೇಶ
ನುತ್ತಮೋತ್ತಮವೆನಿಪ ಶತಕವನು ಬಲ್ಲಂತೆ
ಬಿತ್ತರಿಪೆ ವಾರ್ಧಿಕ[೧][ದ][೧] ಷಟ್ಪದಿಗಳಿಂದೆ ಮನವಿತ್ತು ಸುಜನರು ಕೇಳ್ವುದು॥ಪಲ್ಲ॥

ಗೋಪ ಗೋಪತಿನಮಿತ ಗೋಕರ್ಣ[೨]ಲಂಕಾರ[೨]
ಗೋಪುತ್ರಿಯರ್ಧಾಂಗ ಗೋಜಾತಶತ್ರುಧರ
ಗೋಪವಾಹನಮಿತ್ರ ಗೋತನಯಶಿರಪಾತ್ರ ಗೋವಸನಪಂಚಾನನ
ಗೋಪುತ್ರ [೩]ಸಂಹನನ[೩] ಗೋರಹಿತ ಖಳಶಿಕ್ಷ
ಗೋಪ್ರೀಯ ಶಿಶುಧರನೆ ಗೋತ್ರಿತಯ ಘನಮಹಿಮ
ಗೋಪಂಚಧರನಾಶ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೧ ॥

ಹರಿಗರ್ಭಶಿರಪಾಣಿ ಹರಿತನುಜವಪುದಹನ
ಹರಿಮುಖ್ಯಸುರವಿನುತ ಹರಿಕೋಟಿಹರಿರೂಪ
ಹರಿಮಿತ್ರ ಹರಿಗಾತ್ರ ಹರಿಭೂಷ ಹರಿನಾಶ ಹರಿಣಾಂಕಧರ ಶಂಕರ
ಹರಿಯಾಪ್ತ ಹರಿಜನಕ ಹರಿನೇತ್ರ ದಯಭರಿತ
ಹರಿಮೌಳಿ ಹರಿವಸನ ಹರಿಗಮನಸಖ ಕರುಣ
ಹರಿಕಾರಿ ಹರಿಧರನೆ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೨ ॥
ಅಮೃತೋದ್ಭವ ಮುಖ್ಯ ಮುನಿವಿನುತ ಸುಪ್ರೀತ
ಅಮೃತೋದ್ಭವಶೇಖರ [೧]ಭವಭಂಜಗಿರಿಚಾಪ[೧]
ಅಮೃತೋದ್ಭವನಯ[೨]ನಮಿತ್ರ[೨] ನಾರದ ಸ್ತೋತ್ರ ಅಮೃತಾಕರ ಧೂರ್ಜಟಿ
ಅಮೃತಾ[೩]ಖ್ಯಾಯ ಪಾರ್ವ[೩]ಪ್ರಿಯ ನುತಕಾಯ
ಅಮೃತಶರೀರ ಭವದೂರ ಸದ್ಗುಣಸಾರ
ಅಮೃತಚರಿತ್ರ ಘನ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೩ ॥

ಶಿವಚರಿತ ದಯಭರಿತ ಶಿವಗಾತ್ರ ಶಿಖಿನೇತ್ರ
ಶಿವಭೂಷ ಶಿವನಾಶ ಶಿವಪ್ರೀಯ ಶಿರಗೈಯ
ಶಿವನಾಮ ಸಲೆ ಭೀಮ ಶಿವಧರನೆ ಶಂಕರನೆ ಶಿವರಮಣ ಸ್ತೋತ್ರಚರಣ
ಶಿವಶಯನ ಸುತದಹನ ಶಿವಕಥನ ಪುರಮಥನ
ಶಿವಕಳೆಯ ಶಿವನಿಳಯ ಶಿವಶಿಕ್ಷ [೪]ಸುರರಕ್ಷ[೪]
ಶಿವ ದುರಿತಗಜಸಿಂಹ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೪ ॥

ಈಶನೇ[೫] ಕರುಣಿ ಜಗದೀಶನೇ[೫] ರಜತಾದ್ರಿ
ವಾಸನೇ[೫] ಅಖಿಳಭೂತೇಶನೇ[೫] ತುಹಿನಗಿರಿ
ಜೇಶನೇ[೫] ಆಕಾಶಕೇಶನೇ[೫] ದೈತ್ಯಪುರನಾಶನೇ[೫] ನಿರ್ದೋೀಷನೇ[೫]
ಶೇಷನಂ ಧರಿಸಿದ ವಿಲಾಸನೇ ಸ್ಮರಭಸ್ಮ
ಭೂಷನೇ [೫]ಭಕ್ತರೋೲ್ಲಾಸನೇ[೫] ಶಂಭು ಸ
ರ್ವೇಶನೇ[೫] ಧವಳಾಂಗ ನಿಜಲಿಂಗ ಭವಭಂಗ ಶರಣಜನವರದ ಜಯತು॥ ೫ ॥

ನೋೀಡುತಿಪ್ಪುದರಿಂದೆ ಕೇಳುವನ ದೆಸೆಯಿಂದೆ
ರೂಢಿಯೊಳು ಮರಣವಾದಪನ ತಾತನ ಪಿತನ
ಪಾಡುಗೆಲಿಸಿದನ ತನುಭವನ ಬಾಣಕೆ ಸಿಲ್ಕದವನ ಜನಕನ ತನುಜನ
ಕೂಡೆ ಕಾಳಗವಿತ್ತು ಮಡಿದನೊಳು ಸ್ನೇಹವನು
ಮಾಡಿದಪನಯ್ಯನಿಂದರಳುವ ಸುಮಾರಿಯನು
ಸೂಡಿದನೆ ಸುಚರಿತ್ರ ನಿಜಲಿಂಗ ಭವಭಂಗ ಶರಣಜನವರದ ಜಯತು॥ ೬ ॥
ಧ್ವನಿಗೇಳುವದರ ನಾಮದನ ಜನಕನ ಸುತನ
ತನುಜನನುಜನ ಬೊಪ್ಪನಣುಗನೊಡೆಯನ ಸತಿಯ
ಘನಗರ್ವದಿಂದೆ ಸೆರೆವಿಡಿದನಗ್ರಜನೆನಿಪ ದಿಗ್ವಸರ ತಾಳಿದವನ
ಅನುಜೆಯ[೧]ರಸನ[೧] ಭಾವನಾತ್ಮಜನ ಸತಿಯಳ
ಯ್ಯನಪಿತನ [೨]ಜನಕನ[೨] ಜನಕನಯ್ಯನ
[೩]ಯ್ಯನ[೩] ತಾತಶಿರಪಾಣಿ ನಿಜಲಿಂಗ ಭವಭಂಗ ಶರಣಜನವರದ ಜಯತು॥ ೭
॥

ಪ್ರಥಮರಾಶಿಯ ಪೆಸರ ವಾಹನಗೆ ಶಪಿಸಿದನ
ಸತಿಯ ರಮಣನ ಬಳಿಗೆ ಕುಟಿಲವೇಷದೊಳೈದಿ
ಹತಗೈದ ಸ್ನೇಹಿತನ ಪಡೆದಂಥ ಪೊಡವಿಪನ ಪಿರಿಯ ಸೊಸೆಯಳ ಮಾತೆಯ
ಸತತ ಧರಿಸಿದನ ಶತ್ರುವಿನಣ್ಣನೊಡೆಯನಿಗೆ
ಸುತನಾದನಗ್ರಜನ ಶರದಿಂದೆ ಕೆಡಪಿದನ
ಅತಿಶಯದ ಸ್ನೇಹಿತನೆ ನಿಜಲಿಂಗ ಭವಭಂಗ ಶರಣಜನವರದ ಜಯತು॥ ೮ ॥

ಧರಣಿಯಮರರ್ಗೀವ ಕಾಂಚನದ ನಾಮದಲಿ
ಕರಸಿಕೊಳುತಿರ್ಪ ದಿಗ್ವಸನ ಸತಿಯಳ ಪಿತನ
ಸಿರಗಡಿದನವ್ವೆಯಣುಗನ ಜಠರವನು ಸುತ್ತಿಕೊಂಡಿರ್ಪನಾರಾತಿಯ
ಪರಮಸತ್ವಕೆ ಸೋತು ಸುಧೆಯನಿತ್ತನ ಸುತನ
ವರಸತಿಯಳಗ್ರಜನ ಪಟ್ಟದರಸಿಯ ಸಹೋ
ದರನ ಜಾಮಾತಹರ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೯ ॥

ಸವಿರುಚಿಯ ತೋರುತಿರ್ಪವು ಸಪ್ತವಿರುತಿಹನ
ತವೆ ಸಖನ ವಾಹನವ ಧರಿಸಿದನ ಪಿತನ ವಸ
ನವ ಮಾಡಿಕೊಂಡಿಹಳ ತಸ್ಕರನಯನನ ತದ್ವರ್ಣಗರ್ಭನ ತಮ್ಮನ
ವಿವರವಾಗಿರುತಿರ್ಪ ಧ್ವಜದಗಂಧಿಯಪತಿಯ
ಯುವತಿಯಳ ತನುಭವ ಪೌತ್ರಗೊಲಿದೊಲಿದು ಬಾ
ಣವನಿತ್ತು ರಕ್ಷಿಸಿದ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೧೦ ॥
ಕಡುಚಲುವೆ ಪಾರ್ವತಿಯ ತೊಡೆಯಡಿಯೊಳಿಂಬಿಟ್ಟು
ನಿಡುಗುರುಳ ನೇವರಿಸಿ ಕುಡಿಪುರ್ಬುಗಳ ತೀಡಿ
ಇಡಿಕಿರಿದ ನುಣ್ಗಲ್ಲವಿಡಿದು ನುಣ್ಪಿಡುತ ಪೊಂಗೊಡಮೊಲೆಯೊಳುಗುರನಿಡುತ
ಮುಡಿಸಿ ಪೂಸರಗಳನು ಮುಡಿವಿಡಿದು ಚೆಂದುಟಿಯ
ಬಿಡದೆ ಚುಂಬನಗೈವುತಡಿಗಡಿಗೆ ಹಾಯೆನುತ
ಬೆಡಗಿನಿಂದೊಡವೆರೆದ ನಿಜಲಿಂಗ ಭವಭಂಗ ಶರಣಜನವರದ ಜಯತು॥ ೧೧
॥

ಗಳರವದಿ ಚುಂಬನಂಗಳ ರವದಿಯಂಗುಲಂ
ಗಳ ರವದಿ ಕಂಕಣಂಗಳ ರವದಿ ಕಾಲ್ಗೆಜ್ಜೆ
ಗಳ ರವದಿ ತಾಡನಂಗಳ ರವದಿ ಹಾರಹೀರಾವಳಿಯ ರವದಿಂದಲಿ
ಹೊಳೆಹೊಳೆವ ಶಕುನಿಮಂಚದ ರವದಿ ಜಾಣ್ಣಾವು
ಗಳನಾಡುತಿರ್ಪ ರವದಿಂದೆ ಗಿರಿರಾಜಸುತೆ
ಯೊಳುಸುರುತ ಸವಿಗರೆವ ನಿಜಲಿಂಗ ಭವಭಂಗ ಶರಣಜನವರದ ಜಯತು

॥ ೧೨ ॥

೧ಮೂರು೧ ಮೊಗವಿರುತಿಹನೆ ಪಂಚನೇತ್ರನೆ ದಿತಿಸು
ತಾರಾತಿಸಂಹರನೆ ಭಾವಜನ ಸ್ನೇಹಿತನೆ
ತಾರಾಧಿಪತಿಪಾಣಿ ತ್ರಿಶೂಲಮೌಳಿ ವೃಷಶಿರಪಾತ್ರ ಬ್ರಹ್ಮನಮನ
ಮೂರುಪುರರಕ್ಷಕನೆ ಬಲಿಸುತನ ದಹಿಸಿದನೆ
ಬಾರೆಂದು ವಿಕಳದಿಂ ಕರೆವ ಗಿರಿಜೆಯ ಬಳಿಗೆ
ಸಾರಿ ಬಿಗಿದಪ್ಪಿದನೆ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೧೩ ॥

ಅಂಗಜನ ಮುಂಗಯ್ಯ ಗಿಣಿಯೆ ಮುತ್ತಿನ ಮಣಿಯೆ
ತುಂಗಜವ್ವನೆಯೆ ಸದ್ಗುಣಶ್ರೇಣಿ ಫಣಿವೇಣಿ
ಭೃಂಗಕುಂತಳೆ ಚಂದ್ರಮುಖಿಯೆ ಹರಿಣಾಂಬಕಿಯೆ ಶೃಂಗಾರ ಹೊಂತಕಾರಿ
ಪೊಂಗಳಸಕುಚದ ಮೋಹನ್ನೆ ಮಾನಿನಿ ರನ್ನೆ
ಇಂಗಿತವ ಬಲ್ಲ ವೈಯ್ಯಾರಿ ಮನಹಾರಿಯೆನು
ತಂಗನೆಯ ತಕ್ಕೈಪ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೧೪ ॥
ಏತಕೆನ್ನೊಳು ಮುನಿಸು ಭೂತೇಶ ದಯಭರಿತ
ನೀತಿಸಾರವ ಬಲ್ಲ ಜಾತವಿರಹಿತ ಪ್ರಾಣ
ನಾಥ ಚಿತ್ತೈಸು ಕಾಮಾತುರವು ಹೆಚ್ಚಿರಲು ನಾ ತಾಳಲಾರೆನಭವ
ಪ್ರೀತಿಯಿಂದಲಿ ಮಕರಕೇತುವಿನ ತಂತ್ರದೊಳ
ಗೋತು ಕೂಡೆನಲದ್ರಿಜಾತೆಯಳ ಬಿಗಿಯಪ್ಪು
ತೀ ತೆರದೊಳಾಡುತಿಹ ನಿಜಲಿಂಗ ಭವಭಂಗ ಶರಣಜನ೧ವರದ ಜಯತು೧ ॥ ೧೫ ॥

ಘುಡುಘುಡಿಸುತಡಿಗಡಿಗೆ ಕಡುವಿಡಿದು ಜಡಿಜಡಿದು
ನುಡಿನುಡಿಯುತಡಿಗಡಿಗೆ ಗಡಗಡನೆ ದಡದಡಿಸು
ತಡಿಯಿಡುತ ತಡವಿಡದೆ ನಡೆನಡೆದು ಬಿಡಬಿಡದೆ ಒಡನೊಡನೆ ಜಡಗಡಣವ
ಪಿಡಿಪಿಡಿದು ಗಡಬಡಿಸಿ ಸಡೆಸಿಡಿದು ತಡೆಗಡಿದು
ಪಿಡಿಪಿಡಿದು ಕಡಿಕಡಿದು ದೃಢವೀರಭದ್ರನಂ

ಪಡೆದೊಡೆದು ನಿಡುಜಡೆಯ ನಿಜಲಿಂಗ ಭವಭಂಗ ಶರಣಜನವರದ ಜಯತು
॥ ೧೬ ॥

ಘುಳುಘುಳಿಪ ಜಳಧಿಯಿಂದೆಳದೆಳಸಿ ಬಲುವಿಷವು
ಸುಳುಸುಳನೆ ಪೊರಮಟ್ಟು ಛಿಳಿಛಿಳಿಲು ಛಿಳಿಲೆನುತ
ಚಳಚಳಕದುಗ್ರವೆಗ್ಗಳದಳೆದು ಪ್ರಳಯದಲಿ ದಳದುಳನೆ ಸುಡುತ ಬರಲು
ಕಳವಳಿಸಿ ಸಕಳರತಿ ಬಳಬಳಲಿ ಬಾಯಾರಿ
ಬೆಳುಗಳೆಯ ಧರಿಸಿದನೆ [೨]ಕಳೆದುಳುಹುಯೆನಲು ಗಳ
ದೊಳು ತಳೆದ [೩]ಸಿತಿಕಂಠ[೩] ನಿಜಲಿಂಗ ಭವಭಂಗ ಶರಣಜನವರದ ಜಯತು
॥ ೧೭ ॥

ಆರ್ಭಟಿಸಿ ಕೆಂಗಿಡಿಯು ನೆಗೆದು ಛಿಟಿಛಿಟಿಲೆನುತ
ಕರ್ಬೊಗೆಯ ಸೂಸುತಲಿ ಸಿಮಿಸಿಮಿಲು ಸಿಮಿಲೆನುತ
ಪರ್ಬಿತಾಕಾಶಕ್ಕೆ ಪೇರುರಿಯು ಭುಗಿಭುಗಿಲು ಭುಗಿಲೆಂಬ ರವದಿಂದಲಿ
ಪೆರ್ಬೆಂಕಿ ಪಸರಿಸಿತು ಛಿಳಿಛಿಳಿಲು ಛಿಳಿಲೆನುತ
ಸರ್ಬಜನ ಬೆದಬೆದರಲಿಂತು ಪರಿಯಲಿ ಸುಟ್ಟು
ಕೊರ್ಬಿದಸುರರ ಪುರವ ನಿಜಲಿಂಗ ಭವಭಂಗ ಶರಣಜನವರದ ಜಯತು
॥ ೧೮ ॥
ಹೊಳೆಹೊಳೆವ ಕಾಲಂದುಗೆಯು ಘಲಿರುಘಲಿರೆನುತ
ತೊಳತೊಳಗಿ ತೋರ್ಪ ಗೆಜ್ಜೆಗಳು ಘಲಘಲಿಕೆನುತ
ಥಳಥಳಿಪ ಉಡಿಯ ಘಂಟೆಯ ನಾದ ಘಳಿಘಳಿಸಲು [೧]ಘಳಿಲೆನುತ[೧]

ನುಡಿಯುತಿರಲು
ಝುಳಝುಳಿಪ ಭುಜಕೀರ್ತಿ ಝುಣಝುಣರು ಝುಣರೆನುತ
ನಳನಳಿಸುತಂಧಕಾಸುರನ ಎದೆಯೊಳು ನಿಂದು
ನಲಿನಲಿದು ಕುಣಿಕುಣಿದ[೨] ನಿಜಲಿಂಗ ಭವಭಂಗ ಶರಣಜನವರದ ಜಯತು
॥ ೧೯ ॥

ಕೆಂಡಗಣ್ಣಿನ ಕೋಪದಂಡಲೆಯೊಳತಿ ಕ್ರೋಧ
ಗೊಂಡು ಹೂಂಕಾರದಲಿ ಡೆಂಡಣಿಸುತ ಸಹಾಯ
ಮಂಡಲಕೆ ಬಂದು ಬ್ರಹ್ಮಾಂಡ ಬಿರಿದೊಡೆವಂತೆ ಖಂಡೆಯವ ಝಳಪಿಸುತಲಿ
ಕೆಂಡ ಗಜರಾಕ್ಷಸನ ಕಂಡು ವೇಗದೊಳೈದಿ
ತುಂಡುಗಡಿದಾ ಶಿರವ ಕೊಂಡೊಯ್ದು ಮಲೆತವರ
ಗಂಡ ನಿನಗಿದಿರುಂಟೆ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೨೦
॥

ವರಚಲುವ ಸದ್ಗುಣವನೊರೆದೊರೆದು ಬೋಧಿಸಲು
[೩]ಹರನೆ[೩] ನಿನಗಿಂದಾರು ಪಿರಿಯರಿಲ್ಲದರಿಂದೆ
ಕೊರಳೊಳಗೆ ಬಗೆಬಗೆಯ ಶಿರಮಾಲೆ[೪]ಗಳ[೪] ತಾಳ್ದೆ ಕರಿದೊಗಲಪೊರ್ದೆಯಭವ
ಉರಗನಾಭರಣವನು ಧರಿಸಿಕೊಂಡೆಲೆ ದೇವ
ಸಿರಿಯಿರಲು ಮರುಳಂತೆ ತಿರಿದುಂಡೆ ಸತಿಯನಾ
ದರೆ ಬೇಡಿದರಿಗಿತ್ತೆ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೨೧ ॥

ಕಡುಮೋಹದಿಂದೆ ಕೈವಿಡಿದು ರಕ್ಷಿಸಿಕೊಂಬ
ಒಡೆಯರೆಂಬುವರಿಲ್ಲ ಅಡಿಗಡಿಗೆ ಬಣ್ಣಿಸುವ
ಪಡೆದವರು ಮುನ್ನಿಲ್ಲದೊಡೆ ಶಿರವ ಕುಂತಳವು ತೊಡರಿ ನಿಡುಜಡೆಯಾದವು
ಉಡಿಗೆ ಪುಲಿಚರ್ಮ ಮೈಗಿಡಿವಿಡಿದ ಬೂದಿ ಕ
ಪ್ಪಡರಿತಿದನೇಂ ಪೇಳ್ವೆ ಬಿಡದೆ ಕರತಳದಲ್ಲಿ
ಪಿಡಿದೆ ಶಿರಪಾತ್ರೆಯನು ನಿಜಲಿಂಗ ಭವಭಂಗ ಶರಣಜನವರದ ಜಯತು ॥
೨೨ ॥
ಸಿರಿವಂತನೆನಲು ಭಿಕ್ಷವ ಬೇಡಿದೆಲೆ ದೇವ
ಸಿರಿಹೀನನೆನಲು ಮೂಲೋಕದೊಡೆಯನು ನೀನು
ಧರಣೀಶನೆನಲು ಬಲಿಸುತನ [೧]ದ್ವಾರವ[೧] ಕಾಯ್ದೆ ಬಡವನೆನಲಪ್ರತಿಮನು
ಹಿರಿಯನೆಂಬೆನೆ ಕಲ್ಲಲಿಡಿಸಿಕೊಂಡೆಲೆ ದೇವ
ಕಿರಿಯನೆಂ[೨]ದೆನಲು ದೇವಾಧಿದೇವೇಶ[೨] ನಿ

ಮ್ಮಿರವ ಬಣ್ಣಿಸಲರಿದು ನಿಜಲಿಂಗ ಭವಭಂಗ ಶರಣಜನವರದ ಜಯತು ॥
೨೩ ॥

ಪ್ರತಿರಹಿತನೆಂಬುವದು ಪುಸಿಯಲ್ಲವೈ ಸದಾ
ಗತಿಯಾಪ್ತಸಾರಂಗ ತುಹಿನಕರಮೌಳಿ ಿದುಃ
ಕೃತಿಿಭೂಷಣಾಂಬುಜೋದರಬಾಣ ಮೇರುಪರ್ವತಿಶರಾಸನಗಳಿವೆ ಕೋಿ
ಶತಪತ್ರಿಸಖಕೋಟಿಿತೇಜವಿಗ್ರಹನೆ ಮ
ನ್ಮಥನಾಶ ನಿನಗಿಲ್ಲದಿನ್ನೊರ್ವಗಿನಿತುಂಟೆ
ಚತುರಾಸ್ಯನುತಚರಣ ನಿಜಲಿಂಗ ಭವಭಂಗ ಿಶರಣಜನವರದ ಜಯತುಿ॥ ೨೪
॥

ಶಿವ ನಿಮ್ಮ ಸ್ತುತಿಸಲುರಗೇಂದ್ರನಂತಿರಬೇಕು
ಶಿವ ನಿಮ್ಮ ನೋಡುಿವರೆ ಸುರಪನಂತಿರಬೇಕು
ಶಿವ ನಿಮಗೆ ಪುಷ್ಪಾರ್ಚನೆಯ ಮಾಡುವರೆ ಕಾರ್ತಿವೀರ್ಯನಂತಿರಲುಬೇಕು
ಶಿವ ನಿಮ್ಮ ಪೂಜಿಸಲು ಬಾಣನಂತಿರಬೇಕು
ಶಿವಕತೆಯ ಕೇಳೆ ರಾವಣನಂತೆಯೆನಗೆಯಿಂ
ತಿವನೆಲ್ಲ ಕೊಡದಾದೆ ನಿಜಲಿಂಗ ಭವಭಂಗ ಶರಣಜನವರದ ಜಯತು॥ ೨೫
॥

ಚಿತ್ತೈಸು ಶಂಕರನೆ ಮತ್ತೊರ್ವ ಸತಿಯಳನು
ಅತ್ಯಂತ ಪ್ರೇಮದಲಿ ಪೊತ್ತೆ ಸಿರದೆಡೆಯಲ್ಲಿ
ಮತ್ತೆ ನಾನಾಕೆಗಿಂದತ್ತತ್ತಲಾದೆನೆಂದೆನುತ ಪಾರ್ವತಿ ನುಡಿಯಲು
ಗೋತ್ರಾರಿಗತಿಭೋಗವಿತ್ತು ನಾಗಜಚರ್ಮ
ವಸ್ತ್ರನಾದಡೆ ಕಿರಿದೆ ಚಿತ್ತವಲ್ಲಭೆ ಿಕೇಳೆಿ
ನುತ್ತ ಸಂತೈಸಿದನು ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೨೬ ॥
ಮದನಾರಿಯನು ತಿಳಿಯದೆ ವಿಚಾರಿಸದೆ ದಯಾ
ನಿಧಿಯೆಂದು ಫಣಿರಾಜನಧಿಕಹರುಷದೊಳಿರಲು
ಗದಗದಿಪ ಸೀತಾಳನದಿಯ ಸನ್ನಿಧಿಯೊಳಿರಲಿದಕೆ ಬಲುಸನ್ನಿಗೊಂಡು

ಹದಗೆಟ್ಟು ಕರ್ಣ ಕೇಳದವೊಲಾಯಿತು ನಿನ್ನ
ಬದಿಯೊಳಾನಿರ್ದು ವ್ಯಾಧಿಯಲಿ ಬಡವಾದೆನೆನೆ
ಸುದತಿಯಳ ಮುದ್ದಿಸಿದ[೧] ನಿಜಲಿಂಗ ಭವಭಂಗ ಶರಣಜನವರದ ಜಯತು
॥ ೨೭ ॥

ಶಶಿಯು ಗಗನದಲಿ ಬಲು ಬಿಸಿಗಾತ್ರವನು ತಳೆದ
ನಿಶಿವೈರಿ [೨]ಬಲಿ[೨]ಸೀತಳವನಾಂತ ಜಗವರಿಯೆ
ಒಸೆದು ಹಿಮಗಿರಿರಾಜ ಖೇಚರಕೆ ಪಾರಿದನು ಹನುಮಂತ ರತಿಯ ಕಾಂತ
ಅಸಮಶರ ಭೂಮಿಯನು ಕದ್ದ ರಾಕ್ಷಸನಂತೆ
ವಿಷಗೊರಳ ಚಿತ್ತೈಸೆನಲು ಮೆಚ್ಚಿ ಸತಿಯ ಸಂ
ತಸದಿಂದ ಮುದ್ದಿಸಿದ ನಿಜಲಿಂಗ ಭವಭಂಗ ಶರಣಜನವರದ ಜಯತು॥ ೨೮
॥

ಕನ್ನಡಿಯ ಮೇಲ್ವಲಗೆಯೊಳಗೆ ಪಾರ್ವತಿಯ ಮೊಗ
ಚೆನ್ನಾಗಿ ಪೊಳೆಯೆ ಗಗನದಿ ಮೆರೆವ ಪೂರ್ಣಶಶಿ
ಯೆನ್ನುತಲಿ ಷಣ್ಮುಖನು ಗಣಪತಿಗೆ ತೋರುತಿರಲವ ನೋಡುತಿರಲದರೊಳು
ತನ್ನ ರೂಪವ ಕಂಡು ಇನ್ನುಂಟೆ ಪ್ರತಿಗಣಪ
ನೆನ್ನುತವನನು  ಸೀಳ್ವೆನೆಂದು ಸೊಂಡಿಲ ನೆಗಪು
ವನ್ವಯಕೆ ನೆರೆ ನಗುವ ನಿಜಲಿಂಗ ಭವಭಂಗ ಶರಣಜನವರದ ಜಯತು॥ ೨೯
॥

ಕಂಗೊಳಿಪ ಕುಂತಳಕೆ ನಾಸಿಕಕೆ ವೈರತ್ವ
ಕಂಗಳಿಗೆ ರಾಜಿಸುವ ಪಣೆಗೆ ಬಲು ವೈರತ್ವ
ರಂಗುದುಟಿಗಳ್ಗೆ ರದನಂಗಳ್ಗೆ ವೈರತ್ವ ಮೊಲೆಗೆ ಮಧ್ಯಕೆ ವೈರವು[೩]
ಇಂಗಿತದಿ ತಿಳಿಯಲಿಂತಪ್ಪ ಹಗೆತನವಿರಲು
ಸಂಗಡಿಸಿಕೊಂಡು ಸಂತೈಸಿಕೊಂಡಿರುತಿರ್ಪ
ಮಂಗಳಾಂಗಿಯ[೪]ಕಾಂತ[೪] ನಿಜಲಿಂಗ ಭವಭಂಗ ಶರಣಜನವರದ ಜಯತು
॥ ೩೦ ॥

ಕಾಪುರುಷರಿಗೆ ಸುಜನರಿಂಗಿತವು ತಿಳಿಯುಂಟೆ
ಕೋಪಿಗಳ ಮನದೊಳಗೆ ಕರುಣಗುಣವಿರಲುಂಟೆ
ಪಾಪಿಮನುಜರಿಗೆಲ್ಲ ಧರ್ಮವಾಸನೆಯುಂಟೆ ನಿಂದಕಗೆ ನೀತಿಯುಂಟೆ
ಕೂಪದೊಳು ಹರಿಯುತಿಹ ಜಲವ ನೋಡಿದರುಂಟೆ
ಆ ಪರಮ ಮೂಢರಿಗೆ ಶಿವ ನಿಮ್ಮ ಸ್ಮರಣೆಯಾ
ಲಾಪದೊಳಗಿರಲುಂಟೆ ನಿಜಲಿಂಗ ಭವಭಂಗ ಶರಣಜನವರದ ಜಯತು॥ ೩೧
॥

ಧುರಧೀರನಾದವಗೆ ಮರಣದಂಜಿಕೆಯುಂಟೆ
ವರ ಜಿತೇಂದ್ರಿಗೆ ಚದುರೆಯರ ಹಂಬಲಿರಲುಂಟೆ
ಮೆರೆವ ತ್ಯಾಗಿಗೆ ಹಣದ ಪರವೆಯೆಂಬುವುದುಂಟೆ ಬಲ್ಲರ್ಗೆ ಭಯಗಳುಂಟೆ
ಪರಮ ಸುಜ್ಞಾನಿಗಳಿಗತಿಗರ್ವವಿರಲುಂಟೆ
ಧರಣಿಯೊಳು ಮೋಕ್ಷವನು ಬಯಸುವರು ಶಿವ ನಿಮ್ಮ
ಸ್ಮರಣೆಯನು ಬಿಡಲುಂಟೆ ನಿಜಲಿಂಗ ಭವಭಂಗ ಶರಣಜನವರದ ಜಯತು॥ ೩೨
॥

ಧೃಡವಿಲ್ಲದನ ಭಜನೆ ಸಿದ್ಧಿಯಾಗುವುದುಂಟೆ
ಕಡುಮಂದಮತಿಗೆ ಪೇಳಲು ಜ್ಞಾನ ಬರಲುಂಟೆ
ನಡತೆಹೀನನ ಹೃದಯದೊಳು ಭಕ್ತಿಗುಣವುಂಟೆ ಖೂಳರಿಗೆ ಸತ್ಯವುಂಟೆ
ಬಡಮನದವಂಗೆ [1]ಔದಾರ್ಯ[1]ಬುದ್ಧಿಗಳುಂಟೆ
ಪಡೆದುದಲ್ಲದೆ ಹೆಚ್ಚು ಬರಲುಂಟೆ [2]ನಿನ್ನ[2]ನೆಯ
ದೊಡೆ ಸ್ಥಿರದ ಪದವುಂಟೆ ನಿಜಲಿಂಗ ಭವಭಂಗ ಶರಣಜನವರದ ಜಯತು॥ ೩೩
॥

ಜಗದಂಬಕನ ಕೂಡೆ ತಮವು ಸೆಣಸುವುದುಂಟೆ
ಖಗರಾಜನೊಡನೆ ದ್ವಯಜಿಹ್ವೆ ಗೆಲ್ಲುವುದುಂಟೆ
ಭುಗಿಲೆನಿಪ ವ್ಯಾಘ್ರನೊಳು ಮೇಷ ಜಯಿಸುವುದುಂಟೆ ಕುಲಿಶ ಗಿರಿಗಂಜಲುಂಟೆ
ಮೃಗರಾಜನೊಳು ಕಾದಿ ಕುಂಭಿ ಜೀವಿಸಲುಂಟೆ

ಜಗದೊಡೆಯ ನಿನ್ನ ನಾಮವ ನುತಿಪ ಪುಣ್ಯಾತ್ಮ
ರಿಗೆ ದೋಷವಿ಼ರಲುಂಟೆ ನಿಜಲಿಂಗ ಭವಭಂಗ ಶರಣಜನವರದ ಜಯತು॥ ೩೪
॥

ಸಂಗೀತಸವಿಯು ಬಧಿರಂಗೆ ೧ತೋರು೧ವುದುಂಟೆ
ಕಂಗುರುಡನಿಗೆ ಕನ್ನಡಿಯ ಹಂಬಲಿರಲುಂಟೆ
ರಂಗು೨ದುಟಿ೨ ಮಾಣಿಕ್ಯ ಥಳಥಳಿಸುತಿ಼ರಲು಼ ಗೋಲಾಂಗುಲಗೆ ಪರಿಖೆ಼ಯುಂಟೆ
ಕಂಗೊಳಿಸು಼ವಿನಿಗೋಲ ರುಚಿಯು ಬೋಡನಿಗುಂಟೆ
ಮಂಗಳಾತ್ಮಕ ನಿನ್ನ ದಿವ್ಯನಾಮವನರಿಯ
ದಂಗೆ ಭವ ಬಿಡಲುಂಟೆ ನಿಜಲಿಂಗ ಭವಭಂಗ ಶರಣಜನವರದ ಜಯತು॥ ೩೫ ॥

ಮರಣಕಾಲಕೆ ಪಿರಿದು ಅರಸುತನ ಬರಲೇನು
ಪರಮರೋಗದೊಳು ಘೃತಪರಮಾನ್ನ ಬರಲೇನು
ಹರಿಣಾಕ್ಷಿ ವೃದ್ಧನಾಗಿರುವಾಗ ಬರಲೇನು ಧರಣಿಯೊಳು ಬೆಳೆದ ಫಲವು
ಉರಿದು ಹಾರಿದ ಬಳಿಕ ಭರದಿ ಮಳೆ ೬ಬರಲೇನು೬
ಹರಣ ಹಿಂಗದ ಮುನ್ನ ನಿನ್ನ ಸ್ಮರಿಸದ ಮನುಜ
ನಿರಲೇನು ಧರೆಯೊಳಗೆ ನಿಜಲಿಂಗ ಭವಭಂಗ ಶರಣಜನವರದ ಜಯತು॥ ೩೬ ॥

ಪತಿಯ ನಿಂದಿಸುತಿಪ್ಪ ಸತಿಯಿದ್ದು೭ ಫಲವೇನು
ಅತಿಮಂದಮತಿಯಾದ ಸುತನಿದ್ದು೭ ಫಲವೇನು
ಮತಿಯಿಲ್ಲದವನ ಸಂಗತಿಯಿದ್ದು೭ ಫಲವೇನು ಹಿತವಿಲ್ಲದರ ಬಳಿಯಲಿ
ಸತತ ಮನಮುಟ್ಟಿ ಧಾವತಿಯ ಮಾಡಿದಡೇನು
ಚತುರಾಸ್ಯನಮಿತ ನಿನ್ನಯ ಪುಣ್ಯನಾಮವನು
ನುತಿಸದವನಿದ್ದೇನು ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೩೭ ॥

ಚೋರ ನಿಂದಿಸಲಾಗಿ ಚಂದಿರಗೆಕುಂದೇನು
ಪೋರ ನಿಂದಿಸಲಾಗಿ ಪ್ರಾಜ್ಞರಿಗೆ ಕುಂದೇನು
ದಾರಿದ್ರ ನಿಂದಿಸಲು ದಾನಶೂರಗೆ ಬಂದ ಕುಂದೇನು ಹುಟ್ಟಂಧಕ

ಭೂರಿಕೋಪದಿ ಹಳಿಯೆ ಭಾಸ್ಕರಗೆ ಕುಂದೇನು
ಮಾರಾರಿ ನಿನ್ನ ನಿಂದಿಸುವವರು ನರಕದೊಳು
ಸೇರುವರು ಸತ್ಯವಿದು ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೩೮ ॥

ಬಲುಲೋಭಿಗಳ ಬಳಿಯೆ ಧನವಿದ್ದು ಫಲವೇನು
ಕಲಿಯಿಲ್ಲದವಗೆ [೧]ಚಂದ್ರಾಯುಧವು ಇದ್ದೇನು[೧]
ನೆಲೆಯರಿತುವೋದಲರಿಯದವನ ಬಳಿಯೆ ಕಾವ್ಯಸಾರಂಗಳಿದ್ದರೇನು
ಹೊಲಬರಿಯದನ ಬಳಿಯೆ ಸಂಜೀವವಿದ್ದೇನು
ಮಲಹರನೆ ನಿನ್ನ ಭಜಿಸದ ಮನುಜ ನರಜನ್ಮ
ದಲಿ ಬಂದು ಫಲವೇನು ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೩೯ ॥

ಸಂಗರಕೆ ಭೀತಿಗೊಂಬುವ ಬಂಟನಿ[೨]ದ್ದೇನು
ಮುಂಗಂಡು ಮಾತನಾಡದ ಸಚಿವನಿ[೨]ದ್ದೇನು
ಇಂಗಿತವನರಿತು ನಡೆಯದ ಗೆಳೆಯನಿ[೨]ದ್ದೇನು ವಿಮಲಶಾಸ್ತ್ರಾಗಮವನು
ಅಂಗಯಿಸಿ ಓದಿಕೊಳ್ಳದ ಪಾರ್ವನಿದ್ದೇನು
ಅಂಗಭವಹರ ನಿಮ್ಮ ಸ್ತುತಿಮಾಡದಿಪ್ಪ ಪಾ
ಪಾಂಗನವನಿದ್ದೇನು ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೪೦ ॥

ಕೊಟ್ಟುಬಳಿಕಿನ್ನು ಮನದೊಳಗೆ ಕುದಿವನು ಮೂರ್ಖ
ಕೆಟ್ಟು ಪಿಸುಣಿಗ ನೆಂಟರನು ಸೇರುವನು ಮೂರ್ಖ
ನಿಷ್ಠೆವಂತರ ಹಳಿದು ನಿಂದಿಸುವನತಿಮೂರ್ಖ ದಯದೊಳಾಳುವವೊಡೆಯನ
ಬಿಟ್ಟಾಡಿ ದೂರಿಕೊಂಬುವನೀಗ ಕಡುಮೂರ್ಖ
ಸೃಷ್ಟಿಗೀಶ್ವರ ನಿಮ್ಮ [೩]ಸ್ತುತಿಗಳನು ಜಗದೊಳಗೆ
ಬಿಟ್ಟವನು [೪]ಬಲು[೪]ಮೂರ್ಖ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೪೧ ॥

ಸರಿಯಿಲ್ಲದರ ಕೂಡ ವಾದಿಸುವವನತಿಮೂರ್ಖ
ಗುರುಹಿರಿಯರುಗಳ ವಾಕ್ಯವ ಮಿರುವವ ಮೂರ್ಖ
ಗುರುವಚನದಲಿ ಹಮ್ಮನಾಡುವವಮೂರ್ಖ ಬಲುಗಾಡಿಕಾರ್ತಿಯರೊಲವನು
ನೆರೆನಂಬಿ  ನಿಜವೆಂದು ಮರುಳುಗೊಂಡವ ಮೂರ್ಖ
ಕರುಣನಿಧಿ ಭಕ್ತವತ್ಸಲ ನಿಮ್ಮ ನಾಮವನು
ಸ್ಮರಿಸದವ ಘನಮೂರ್ಖ ನಿಜಲಿಂಗ ಭವಭಂಗ ಶರಣಜನವರದ ಜಯತು
॥ ೪೨ ॥
ಅಂತರಂಗವ ಕಪಟ ಮನುಜಗುಸುರುವ ಮೂರ್ಖ
ಚಿಂತಾತುರನೊಳು ಸರಸವನಾಡುವವ ಮೂರ್ಖ
ಸಂತೆಯೊಳು ಶಾಸ್ತ್ರವನು ಹೇಳುವವ ಕಡುಮೂರ್ಖ ತನಗಿಂದ ಬಲ್ಲಿದರೊಳು
ಪಂತವನು ಕಟ್ಟಿಕೊಂಬುವನೀಗ ಸಲೆ ಮೂರ್ಖ
ಕಂತುಹರ ನಿಮ್ಮ ನಾಮವ ನುತಿಸದಿರ್ಪನ
ತ್ಯಂತವಾಗಿಹ ಮೂರ್ಖ ನಿಜಲಿಂಗ ಭವಭಂಗ ಶರಣಜನವರದ ಜಯತು॥
೪೩ ॥

ಮನ್ನಣೆಯ ಕೊಡದ ಠಾವಿಗೆ ಹೋಗುವವ ಮೂರ್ಖ
ಅನ್ಯರನು ಧಿಕ್ಕರಿಸಿಯಾಡಿ ಕೊಂಬವ ಮೂರ್ಖ
ಹೊನ್ನುಳ್ಳ ದೊರೆಗಳನು ನೋಡಿ ಮರುಗುವ ಮೂರ್ಖ

ತನ್ನೊಳೇನುವನರಿಯದೆ
ಉನ್ನತೋನ್ನತ ಪಂಡಿತರ ಹಳಿಯುವವ ಮೂರ್ಖ
ಪನ್ನಂಗಭೂಷಣಾನ್ವಿತ ನಿನ್ನ ಚಾರಿತ್ರ
ವನ್ನು ಜರಿವವ ಮೂರ್ಖ ನಿಜಲಿಂಗ ಭವಭಂಗ ಶರಣಜನವರದ ಜಯತು ॥
೪೪ ॥

ಅನುವರಿಯದಾತಂಗೆ ದೈನ್ಯಬಡುವವ ಮೂರ್ಖ
ತನುಜರಿಗೆ ವಿದ್ಯೆಯನು ಕಲಿಸದವನತಿ ಮೂರ್ಖ

ಜನನಿಜನಕರ ಬೈದು ಬಳಲಿಸುವ“ಬಲು”ಮೂರ್ಖ ಮಾತುಹೋಗಾಡಿ ಬಳಿಕ
ನೆನೆನೆನೆದು ಕಡೆಯಲ್ಲಿ ಹುಡುಕಾಡುವವ ಮೂರ್ಖ
ಘನಕರುಣಿ ನಿಮ್ಮ ಧ್ಯಾನವ ಮಾಡದವ ಮೂರ್ಖ
ಮುನಿಜನರ ವಂದಿತನೆ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೪೫ ॥

ಏಕಾಂತವಾಡುವಲ್ಲಿಗೆ ಹೋಗದವ ಜಾಣ
ಲೋಕದೊಳಗವರವರ ತೆರದಿ ನಡೆವವ ಜಾಣ
ಕಾಕುಮನುಜರನು ಸರಿಗಟ್ಟಿಕೊಳದವ ಜಾಣ ಭೂಕಾಂತರಾಸ್ಥಾನದಿ
ಜೋಕೆಯಿಂದೇಕಚಿತ್ತದಲಿ ನಡೆವವ ಜಾಣ
ಲೋಕೇಶ ನಿಮ್ಮ ಚರಣವ ನಂಬಿದವ ಜಾಣ
“ಲೋಕದೊಳು ಸಲೆಜಾಣ” ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೪೬ ॥

ಮಂದಮತಿ ನಿಂದಿಸಲು ತಾಳಿಕೊಂಡವ
ಒಂದೆ ಮನದಲಿ ‘ಧ್ಯಾನ’ವನು ಮಾಡುವವ ಜಾಣ
ಬಂದ ಬಲುಚಿಂತೆಯೊಳು ಧೈರ್ಯವಿಡಿದವ ಜಾಣ ಹೀನರಿಂ ಕಲಹಂಗಳು
ಸಂದಿಸಲು ಶಾಂತಗುಣವನು ತಾಳಿದವ ಜಾಣ
ಇಂದುಶೇಖರ ನಿಮ್ಮ ಪೂಜಿಪನು ಕಡುಜಾಣ
ಅಂಧಕಾಸುರಹರನೆ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೪೭ ॥

ಸತಿಯಳಿಗೆ ಸಲುಗೆಯನು ಕೊಡದವನು ಕಡುಜಾಣ
ಚತುರ ನುಡಿ ಬಾರದಿರೆ ಸುಮ್ಮನಿರುವವ ಜಾಣ
ಗತಿಯಿಲ್ಲದವಗೆ ಹೊಣೆಯಾಗದಿದ್ದವ ಜಾಣ ಯೋಗ್ಯವಲ್ಲದ ನುಡಿಗಳ
ಶ್ರುತಿಗೊಟ್ಟು ಕೇಳಲೊಲ್ಲದೆ ತೊಲಗುವವ ಜಾಣ
ಸಿತಿಕಂಠ ನಿನ್ನ ಚರಣಾಂಬುಜವ ನಂಬಿದವ
ಕ್ಷಿತಿಯೊಳಗೆ ಬಹುಜಾಣ ನಿಜಲಿಂಗ ಭವಭಂಗ ಶರಣಜನವರದ ಜಯತು

॥ ೪೮ ॥

ಕ್ಷುಧೆಯಿಲ್ಲದರೋಗಣೆಯ ಮಾಡದವ ಜಾಣ
ಮೃದುನುಡಿಯನಾಡುತಹುದೆನಿಸಿಕೊಂಬವ ಜಾಣ
^ಅಧಿಕಕೋಪಿಗಳೊಡನೆ ಸೋತು ನಡೆವವ^ ಜಾಣ ಚೂರ್ಣ ಕೈಸಾರದನಕ
ವದನದೊಳು ಕ್ರಮುಕವನು ಹಾಕಿಕೊಳದವ ಜಾಣ
ಹೃದಯದೊಳು ಆವಗಂ ನಿಮ್ಮ ಧ್ಯಾನವನು ತ
ಪ್ಪದೆ ಮಾಡುವವ ಜಾಣ ನಿಜಲಿಂಗ ಭವಭಂಗ ಶರಣಜನವರದ ಜಯತು॥ ೪೯
॥

ತನುಜರೊಳು ಕೋಪವನು ಹಿಡಿಯದವ ಬಲುಜಾಣ
ಮನೆಯ ಕದನವನು ಪರರೊಳು ಪೇಳದವ ಜಾಣ
ಧನವಿರಲು ಧರ್ಮವನು ಗಳಿಸಿಕೊಂಬವ ಜಾಣ ದುರ್ಜನರು ಹಳಿವುತಿರಲು
ಮನದೊಳಗೆ ಹಿಡಿದ ವ್ರತಗಳನು ಬಿಡದವ ಜಾಣ
ಅನಲಾಕ್ಷ ನಿಮ್ಮ ಧ್ಯಾನವ ಬಿಡದೆ ಮಾಡುತಿ
ಪ್ಪನು ತಾನು ಸಲೆಜಾಣ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೫೦
॥
ರತಿಕೇಳಿಯಾನಂದವೆಂತೆಂಬ ನೆವದಿಂದೆ
ಪತಿಯ ಜಠರವ ಬಿಟ್ಟು ತನ್ನ ತಾ ಪೊರಮಟ್ಟು
ಸತಿಯ ಗರ್ಭಕೆ ಬಂದು ಇಂಬುಗೊಡುತಲೆ ನಿಂದು ದಿನದಿನಕೆ ಪಿಂಡಬಲಿದು
ಮಿತಿಯಿಂದ ಒಂಬತ್ತು ಮಾಸ ತುಂಬಿದ ಬಳಿಕ
ಕ್ಷಿತಿಗೆ ಪುಟ್ಟಿಸುವ ದೇವರ ದೇವ ನಿನ್ನ ಸ
ತ್ಕೃತಿಯ ಬಲ್ಲವರಾರು ನಿಜಲಿಂಗ ಭವಭಂಗ ಶರಣಜನವರದ ಜಯತು॥ ೫೧
॥

ಪುಟ್ಟಿದಾಕ್ಷಣ ಜನನಿಜನಕರ್ಗೆ ಕಡುಮೋಹ
ಪುಟ್ಟಿ ನಲವಿಂದ ಸಲಹುವರು ಬಳಿಕೊಂದು ಪೆಸ
ರಿಟ್ಟು ತೊಟ್ಟಿಲನಿಕ್ಕುವಾಗ ಜೋ ಜೋಯೆಂದು ಪಾಡುವರು ಸಂಭ್ರಮದೊಳು

ನಿಟ್ಟಿಸುವರಡಿಗಡಿಗೆ ಮುದ್ದಿಸುತ ಮೊಲೆವಾಲ
ಕೊಟ್ಟು ರಕ್ಷಿಸುವಂತೆ ನೇಮಿಸಿದೆ ಶಿವ ನಿಮ್ಮ
ಕಟ್ಟಳೆಗೆ ಸರಿಯುಂಟೆ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೫೨ ॥

ಮಿಡಿಹಸುಳನಾಗಿರುತ ಬಳಿಕ ಗಾಗೂಯೆಂದು
ಹೊಡೆಮಗ್ಗಲಾಗಿ ಬಳಿಕಂಬೆಗಾಲಿಕ್ಕುತಲಿ
ನಡೆಗಲಿತು ಬೀಳುತೇಳುತ ನಗುತಲಳುತ ತೊದಲ್ನುಡಿಯಿಂದೆ ಮಾತಾಡುತ
ಒಡನೆ ಸರಿಗೆಳೆಯರೊಳು ಬಾಲಕೇಳಿಯನೆಲ್ಲ
ಬೆಡಗಿನಿಂದಾಡುತಿಹರಿಂತು ನೇಮಿಸಿದ ಜಗ
ದೊಡೆಯ ನೀನಹುದಹುದು ನಿಜಲಿಂಗ ಭವಭಂಗ ಶರಣಜನವರದ ಜಯತು
॥ ೫೩ ॥

ವಿನಯದಿಂ ಬಾಲಕೇಳಿಯನಾಡುತಿರೆ ಬಳಿಕ
ಅನುನಯದಿ ಉಪನಯನಮಂ ಮಾಡಿ ಕುಲವಿದ್ಯೆ
ಯನು ಕಲಿಸಿ ವೈವಾಹವಾದ ಬಳಿಕಿನ್ನು ಯೌವನದೇವಿ ಬಂದೊದಗಲು
ತನಗಾರು ಸರಿಯಿಲ್ಲವೆನುತ ಪಶುಧನಧಾನ್ಯ
ವನು ತನ್ನದೆನ್ನದೆಂದೆನುತ ಗಳಿಸುವ ತಂತ್ರ
ವನು ಜಗಕೆ ನಿರ್ಮಿಸಿದ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೫೪
॥
ಪ್ರಾಯದಿಂದಿರೆ ಜರಾಂಗನೆಯು ಬಂದೆಡೆಗೊಳಲು
ಕಾಯ ಸತುಗೆಟ್ಟು ಪಂಚೇಂದ್ರಿಗಳು ಸವಿಗೆಡಲು
ಸಾಯಬೇಕಿನ್ನೆನುತ ನುಡಿಯುತಿರೆ ಮರಣಕಾಲಕೆ ರೋಗ ಪ್ರಾಪ್ತಿಯಾಗಿ
ವಾಯು ದೇಹವ ಬಿಟ್ಟು ತೊಲಗಿದಡೆ ಕಿಚ್ಚಿನೊಳ
ಗೊಯ್ದಿಡಲು ರೂಪಳಿದು ಹೋಗುವುದು ಶಿವ ನಿಮ್ಮ
ಮಾಯವಾರಿಗೆ ತಿಳಿವು ನಿಜಲಿಂಗ ಭವಭಂಗ ಶರಣಜನವರದ ಜಯತು॥ ೫೫ ॥

ಕನ್ನಡಿಯು ಹೊಳೆವುತರಮನೆಯೊಳಗೆ ತಾನಿರ್ದು
ತನ್ನೊಳಗೆ ಮನೆಯನೆಲ್ಲವ ತೋರುವಂದದಲಿ

ಪನ್ನಂಗಭೂಷಣನೆ ನಿನ್ನೊಳಗೆ ಜಗವೆಲ್ಲವನು ತಾಳಿಕೊಂಡ ಬಳಿಕ
ಇನ್ನೇನು ಪೇಳ್ವೆ ಜಗದೊಳಗೆಲ್ಲ ನೀನಿರ್ದು
ನನ್ನಿಯಿಂದರಿವ ಜಾಣರಿಗೆ ರೂಪವ ತೋರ್ಪ
ಉನ್ನತೋನ್ನತ ಮಹಿಮ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೫೬
॥

ದಧಿಯ ಮಥನಿಸಲಾಗಿ ನವನೀತ ತೋರ್ಪಂತೆ
ಸುಧೆಗೋಲ ಮರ್ದಿಸಲು ಸಕ್ಕರೆಯು ಆದಂತೆ
ಮುದದಿಂದ ಚಂದನ ವನರೆ ಯಲಾಕ್ಷಣದಲ್ಲಿ ಶ್ರೀಗಂಧ ಪೊಣ್ಮುವಂತೆ
ಅಧಿಕ ಜ್ಞಾನಾರೂಢರಾಗಿ ನಿಟ್ಟಿಸುವ ಸದು
ಹೃದಯರಿಗೆ ತಾನು ತಾನಾಗಿ ಸವಿಗೊಡುವ ದಯ
ನಿಧಿಯೇ ನೀನಹುದಹುದು ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೫೭
॥

ಮೊಲೆವಾಲ ಮೇಲೆ ಬಾಲಕರ ಮನವಿರುವಂತೆ
ಜಲಜಪರಿಮಳಕೆ ಷಟ್ಪದಿಯ ಮನವಿರುವಂತೆ
ಚಲುವ ಚಂದ್ರಮನ ಹಂಬಲು ಚಕೋರಂಗಿರುವ ತೆರನಂತೆ ಭಕ್ತಿಯಿಂದ
ಒಲಿದು ಶಿವ ನಿಮ್ಮ ಧ್ಯಾನವ ಮಾಳ್ಪ ಸಜ್ಜನರ
ಹಲವು ದೋಷವನೆಲ್ಲ ಕಳೆದು ಮರಮರಳಿ ಭವ
ದಲಿ ಬಾರದೊಲು ಮಾಳ್ಪ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೫೮
॥

ಹಲವು ಜಲಕುಂಭದೊಳು ಭಾನುವಿನ ಪ್ರತಿಬಿಂಬ
ಹಲವಾಗಿ ತೋರುತಿರೆ ಗಗನದಲ್ಲಿಹ ಸೂರ್ಯ
ಸಲೆ ತೇಜದಿಂದೊರ್ವನಿರುವಂತೆ ಪದಿನಾಲ್ಕು ಲೋಕದೊಳಗರ್ತಿಯಿಂದ
ನೆಲೆಗೊಂಡು ಪಿಂಡಾಂಡಬ್ರಹ್ಮಾಂಡದೊಳು ತುಂಬಿ
ನಲಿನಲಿದು ನೀನೆ ನೀನಾಗಿಪ್ಪೆ ಜಗದೊಡೆಯ
ಮಲಹರನೆ ನಿರುಪಮನೆ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೫೯ ॥

ಆವ ಮನೆಯೊಳಗಿಪ್ಪ ದೀವಿಗೆಯ ಬೆಳಗೊಂದೆ
ಆವ ಹಸುವನು ಕರೆಯೆ ಕ್ಷೀರರುಚಿ ಕರಮೊಂದೆ
ಆವ ಕೃಷಿಯೊಳು ಬೆಳದ ತಿಲದೊಳಗೆ ಬಪ್ಪ ತೈಲವ ನೋಡೆ ಗುಣಮದೊಂದೆ
ಆವ ಕುಲದೊಳಗಿರಲು ಆವ೧ನಾಮದೊಳಿ೧ರಲು
ಆವ ರೂಪಾಗಿರಲು ಒಳಗಿರುವ ಸ್ವಯಂಜ್ಯೋತಿ
ದೇವ ನೀನಹುದಹುದು ನಿಜಲಿಂಗ ಭವಭಂಗ ಶರಣಜನವರದ ಜಯತು॥ ೬೦ ॥

ಎಂಬತ್ತು ನಾಲ್ಕುಲಕ್ಷದ ಯೋನಿಯೊಳಗೆಲ್ಲ
ಬೆಂಬಿಡದೆ ತೊಳತೊಳಲಿ ಸಕಲರೊಳಗಧಿಕವೆಂ
ದೆಂಬ ಮಾನುಷ ಜನ್ಮ೨ದೊಳು೨ ಪುಟ್ಟಿದಾ೩ಬಳಿಕ ಶಿವ ನೀನು ಕರುಣಿಯೆಂದು
ಇಂಬಾಗಿ ತಿಳಿತಿಳಿದು ನಂಬಿದೆನು ನಿನ್ನ ಪಾ
ದಾಂಬುಜವ ಬಿಡದೆನ್ನ ರಕ್ಷಿಪುದು ದುರಿತಾದ್ರಿ
ಶಂಬ ನೀನಹುದಹುದು ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೬೧ ॥

ಭವಗಡಲನುತ್ತರಿಸಿ ಕಡೆಹಾಯ್ದು ಪೋಗುವರೆ
ಹವಣವಾಗಿರುತಿರ್ಪ ಕಾಯವೆಂದೆಂಬ ಹಡ
ಗವಿದು ಕೈಸಾರಿರ್ದ ಸಮಯದಲಿ ಶಿವ ನಿಮ್ಮ ಧ್ಯಾನವನು ಮರೆಯದಂತೆ
ವಿವರವಾಗಿರುತಿರ್ಪ ಜ್ಞಾನವನು ಕೊಟ್ಟು ಸಲ
ಹುವುದೆನ್ನ ಪರಮಾತ್ಮ ಪರಂಜ್ಯೋತಿ ಪರಬ್ರಹ್ಮ
ಧವಳಾಂಗ ದಯಭರಿತ ನಿಜಲಿಂಗ ಭವಭಂಗ ಶರಣಜನವರದ ಜಯತು॥ ೬೨ ॥

ನಿನ್ನ ನಾಮಾಮೃತವಹಾಯೆಂದು ಸವಿವಂತೆ
ನಿನ್ನ ನಾಮವ ನುತಿಸಿಯಡಿಗಡಿಗೆ ನಲಿವಂತೆ
ನಿನ್ನ ನಾಮವ ನೆನೆದು ಹರುಷಾಬ್ಧಿಯೊಳು ಬಿದ್ದು ಮುಳುಗಿ ನಲಿದಾಡುವಂತೆ
ನಿನ್ನ ನಾಮವ ನುತಿಸಿಯೆನ್ನ ಮೈಮರೆವಂತೆ
ನಿನ್ನ ನಾಮವು ಸತತ ಮರೆಯದೋಲಿರುವಂತೆ

ನಿನ್ನ ನಾಮದೊಳಿರಿಸು ನಿಜಲಿಂಗ ಭವಭಂಗ ಶರಣಜನವರದ ಜಯತು॥ ೬೩ ॥

ಒಮ್ಮೆ ಸಂಸಾರವನು ತೊರೆಯಬೇಕೆಂಬಂತೆ
ಒಮ್ಮೆ ಸಂಸಾರವನು ಮಾಡಬೇಕೆಂಬಂತೆ
ಒಮ್ಮೆ ದೇವರ ಭಜನೆಯನು ಮಾಡಿ ನಿತ್ಯಪದವಿಯ ಪಡೆಯಬೇಕೆಂಬುವ
ಒಮ್ಮೆ ದೇವರ ಭಜನೆಯಿಂದೇನು ಫಲವೆಂದು
ಹಮ್ಮೈಸಿ ಹರಿಯುತಿಹ ಮನವನೊಬ್ಬುಳಿಗೊಳಿಸಿ
ನಿಮ್ಮ ಚರಣದೊಳಿರಿಸು ನಿಜಲಿಂಗ ಭವಭಂಗ ಶರಣಜನವರದ ಜಯತು॥ ೬೪ ॥

ಏನೇನು ತಿಳಿಯದಜ್ಞಾನಿ ದಿಟವಹುದೆನುತ
ಹೀನೈಸುತೆನ್ನ ಕೈ ಬಿಡಲಾಗದೆಲೆ ದೇವ
ನೀನು ಶಂಕರನು ಭವಹರನು ಶಶಿಧರನು ಸಿರಿಕರನುಮೆಯವರನೆನ್ನುತ
ನಾ ನಿನ್ನ ಚರಣಶತಪತ್ರವನು ನಂಬಿದೆನು
ಜ್ಞಾನವನು ಕೊಟ್ಟು ಸಲಹುವುದೆನ್ನ ಜಗದೊಡೆಯ
ನೀನಲ್ಲದಿನ್ನುಂಟೆ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೬೫ ॥

ಸ್ಥಿರಪದವು ಬರುತಿರ್ಪ ಚರಿತವನು ಪಿಡಿದಂತೆ
ಮರಮರಳಿ ಭವಕೆ ಬಹ ಚರಿತವನು ತೊರೆವಂತೆ
ನರಲೋಕದಾಟದೊಳಗಿದ್ದುದಕೆ ಮನವ ತೊಡಕಿಸದೆ ಹೊರಗಾಗುವಂತೆ
ನಿರುತದಿಂದಾತ್ಮದೊಳು ಶಿವ ನಿಮ್ಮ ರೂಪವನು
ಅರಿವಂತೆ ಮರೆವಂತೆ ಕರೆವಂತೆ ಬೆರೆವಂತೆ
ವರವಿತ್ತು ಸಲಹುವುದು ನಿಜಲಿಂಗ ಭವಭಂಗ ಶರಣಜನವರದ ಜಯತು॥ ೬೬ ॥

ನೀನಿದ್ದ ಸಮಯದಲಿ ನಿನ್ನ ತಿಳಿಯದೆ ಜ್ಞಾನ
ಹೀನನಾದಡೆ ಬಳಿಕ ನೀ ತೊಲಗಿದಾಕ್ಷಣಕೆ
ಏನು ಪೇಳುವೆನಿನ್ನು ಬಗೆಬಗೆಯ ಯೋನಿಯೊಳು ತೊಳತೊಳಲಿ ಬಳಬಳಲುತ
ನಾನೆಂತು ಜೀವಿಸುವೆನಯ್ಯ ಕರುಣಾಕರನೆ

ಸ್ವಾನುಭಾವದೊಳೆನ್ನ ಮನವ [೧]ನಿಲ್ಲಿಸಿ ನಿನ್ನ[೧]
ಧ್ಯಾನದೊಳಗಿರಿಸೆನ್ನ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೬೭
॥

ನಿತ್ಯವಾದುದನೆಲ್ಲ ಹಿಡಿಯಲೊಲ್ಲದು ಮನವು
ಮಿಥ್ಯವಾದುದನೆಲ್ಲ ಹಿಡಿಯುತಿಹುದೀ ಮನವು
ಸತ್ಯವಾಡುವರಡಗಿಕೊಂಡಿಹರಸತ್ಯಕ್ಕೆ ಕುಣಿಕುಣಿದು ಬರುತಲಿಹರು
ಮೃತ್ಯುಂಜಯನೆ ನಿಮ್ಮ ಮರೆಹೊಕ್ಕೆ ದುರ್ಮನವ
ಕತ್ತರಿಸಿ ಸನ್ಮಾರ್ಗದೊಳು ಬಿಡದೆ ನಡೆವ ಮನ
ವಿತ್ತು ಸಲಹುವುದೆನ್ನ ನಿಜಲಿಂಗ ಭವಭಂಗ ಶರಣಜನವರದ ಜಯತು॥ ೬೮ ॥

ಪರಸತಿಯ ಬಳಿ[೨]ಗೆಳೆಯು[೨]ತಿದೆ ಕಾಮವೆಂಬುವುದು
ಪಿರಿದು ಬೈದಾಡಿಸುವುದೀ ಕ್ರೋಧವೆಂಬುವುದು
ನೆರೆ ಧರ್ಮಮಾಡಗೊಡದೀ ಲೋಭ [೩]ಮೋಹ ತಾ ಮಿಥ್ಯವನು[೩]ಹರಿಯಗೊಡದು[೪]
ಗುರುಹಿರಿಯರಿಗೆ ನಮಿಸಗೊಡದು ಮದವೆಂಬುವುದು
ಪರಮ ವೈರವ ಬೆಳೆಸುತಿದೆ ಮತ್ಸರಿಂತಿವನು
ಪರಿಹರಿಸಿ ಸಲಹೆನ್ನ ನಿಜಲಿಂಗ ಭವಭಂಗ ಶರಣಜನವರದ ಜಯತು॥ ೬೯ ॥

ಪರುಷ ಲೋಹವನು ತನ್ನಂತೆ ಮಾಡುವ ತೆರದಿ
ಕುರುಡಿ ಪರಹುಳವ ತನ್ನಂತೆ ಮಾಡುವ ತೆರದಿ
ಪರಿಮಳದಿ ಚಂದನವು ಕಾಮರವ ತನ್ನಂತೆ ಮಾಡಿಕೊಂಬುವ ತೆರ[೫]ದಲಿ[೫]
ಪರಮಾತ್ಮ ನಿನ್ನ ಭಕ್ತರಿಗೆ ಸ್ಥಿರಪದವೀವ
ಬಿರುದಂಕನೆಂದು ನಂಬಿದೆನು ಭವಪಾಶವನು
ಪರಿಹರಿಸಿ ಸಲಹೆನ್ನ ನಿಜಲಿಂಗ ಭವಭಂಗ ಶರಣಜನವರದ ಜಯತು॥ ೭೦ ॥

ಎನ್ನೊಳಪರಾಧವೇನಯ್ಯ ದೇವರ ದೇವ
ನಿನ್ನಿಂದ ನಡೆವುದನು ನಿನ್ನಿಂದ ನುಡಿವುದನು
ನಿನ್ನಿಂದ ಸಕಲ ಸುಖದುಃಖಗಳನನುಭವಿಸಿಕೊಂಡಿಪ್ಪ ಬಡವ ನಾನು

ಪನ್ನಂಗಭೂಣನೆ ಪಾವನ್ನ ವಿಗ್ರಹನೆ
ನಿನ್ನ [೧]ನಾಮವ[೧] ಮರೆಯದಂತೆ ಸದ್ಗುಣವಿತ್ತು
ಎನ್ನ ಸಲಹುವುದಯ್ಯ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೭೧ ॥

ಜನನಿ[೨]ಜಠರ[೨]ದಿ ತರಳನಿರಲು ಸಲಹುವರಾರು
ಅನುನಯದೊಳಲ್ಲಿಂದ ಪೊರಮಡಿಸುತಿಹರಾರು
ದಿನದಿನಕೆ ಹೆಚ್ಚಾಗಿ ಬೆಳಸುತಿಪ್ಪರದಾರು ಬಳಿಕೊಂದು ನೆವದಿಂದಲಿ
ತನುವಿಂದೆ ಪ್ರಾಣವನು ಕಡೆಗೆ ತೊಲಗಿಪರಾರು
ಅನಲಾಕ್ಷ ನೀನಲ್ಲದಿನ್ನುಂಟೆ ಭಕ್ತಿಗುಣ
ವನು ಕೊಟ್ಟು ಸಲಹೆನ್ನ ನಿಜಲಿಂಗ ಭವಭಂಗ ಶರಣಜನವರದ ಜಯತು॥ ೭೨ ॥

ತೆಂಗಿನೊಳು ವಿಮಲೋದಕವ [೩]ಹಾಕಿ[೩]ದವರಾರು
ಭೃಂಗವೈರಿಗೆ ಪರಿಮಳವನು ಕೊಟ್ಟವರಾರು
ಕಂಗೊಳಿಪ ನವಿಲಿಂಗೆ ಬಗೆಬಗೆಯ ಬಣ್ಣವನು ಬರೆದು ನಿರ್ಮಿಸಿದರಾರು
ರಂಗುಬಣ್ಣವನು ಪವಳಕೆ ಸಾರ್ಚಿದವರಾರು
ಮಂಗಳಾತ್ಮಕನೆ ನೀನಲ್ಲದಿನ್ನಾರುಂಟು
ಹಿಂಗದೆನ್ನನು ಸಲಹು ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೭೩ ॥

ಕುಸುಮವನು ಕಿವಿಗೆ ಸಾರ್ಚಿದಡೆ ಪರಿಮಳವಹುದೆ
ರಸದಾಳಿ [೪]ಕಬ್ಬ[೪] ನಾಸಿಕ ಹಸಿದು ಸೇವಿಪುದೆ
ಕುಶಲ ವಿದ್ಯೆಯನೆಲ್ಲ ಬಾಯಿ ತಾ ನೋಡುವುದೆ ಹಸಿಹಸಿದು ಬಳಲುತಿರಲು
ಒಸೆದು ನಯನವು ಭೋಜನವನೂಡಿಕೊಂಬುವುದೆ
ಅಸಮಾಕ್ಷ ನೀನಲ್ಲ[೫]ದತಿ ದುರಿತ[೫]ವನು ಪರಿಹ
ರಿಸುವ[೬]ನ್ನರಿನ್ನಾರು[೬] ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೭೪ ॥

ಮಾರುತನು ನಡೆತಂದ ಸಮಯದಲಿ ಧಾನ್ಯವನು
ತೂರಿಕೊಳಬೇಕು ಸಟೆಯಲ್ಲವೀ ವಾಕ್ಯವು ಶ
ರೀರ[೧]ದೊಳು[೧] ಪ್ರಾಣನಾಯಕನಿದ್ದ ಸಮಯದಲಿ ಶಿವ ನಿಮ್ಮ ಹಾಡಿ[೨]ಹೊಗಳಿ[೨]
ಭೂರಿಪಾಪವನೆಲ್ಲ ಈಡಾಡಬೇಕೆಂದು
ಮಾರಾರಿ ನಿನ್ನ ಮರೆಹೊಕ್ಕೆ ಸಲಹುವುದೆನ್ನ
ಮೂರು ಕಣ್ಣುಳ್ಳವನೆ ನಿಜಲಿಂಗ ಭವಭಂಗ ಶರಣಜನವರದ ಜಯತು॥ ೭೫ ॥

ಭವಭವದ ಚರಿತವನು ತಿಳಿತಿಳಿದು ನೋಡಿದರೆ
ಲವಲವಿಸುತೆನ್ನೆದೆಯು ಗದಗದಿಸಿ ನಡುಗುತಿದೆ
ಶಿವನೆ ಕೇಳಿನ್ನು ಪುಟ್ಟಿಸಬೇಡ ಭೂಮಿಯೊಳು ಬೇಡಿಕೊಂಬೆನು ನಿಮ್ಮನು
ಇವನು ಬಲುಮಂದಮತಿ[೩]ಯೆಂದೆನ್ನ[೩] ಜರಿಯ[೪]ದಲೆ[೪]
ಅವಿರಳಾನಂದ ಜ್ಞಾನವನಿತ್ತು ಬಿಡದೆ ಸಲ
ಹುವುದೆನ್ನ ಕರುಣದಲಿ ನಿಜಲಿಂಗ ಭವಭಂಗ ಶರಣಜನವರದ ಜಯತು॥ ೭೬ ॥

ಮನುಮಥನ ಸತ್ಕ್ರೀಡೆಯಾಂತ್ಯದಲಿ ಮದನಾಂಬು
ಜನಕನಾತ್ಮವ ತೊಲಗಿ ಜನನಿಯುದರದಿ ನಿಂದು
ಘನ ಹೇಸಿಕೆಯ ರಕ್ತಮಾಂಸಕಫಕ್ರಿಮಿಯೊಳಗೆ ದಿನದಿನಕೆ [೫]ಪಿಂಡಬೆಳೆದು[೫]
ಅನುವಿಲ್ಲದುಬ್ಬಸದಿ ಹುದುಗಿಕೊಂಡಿರಬೇಕು
ಜನನಕಾಲದಲಿ ಪೊರಮಡುವಾಗ ಬಲುಕಷ್ಟ
ವನು ಪೇಳಲಳವಲ್ಲ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೭೭
॥

ದೋಷವಾಸದ ಯೋನಿಯಿಂದೆ ಪುಟ್ಟಿದ ಬಳಿಕ
[೬]ಪಾಸಿನೊಳಗಿಹ[೬] ತಗಣಿ ಕೂರಿ ಚಿಕ್ಕಡ ಕಡಿಯ
ಲಾ ಸಂಕಟವದೊಂದು ಹೊಟ್ಟೆನೊಂದಳುತಿರಲು ಮೊಲೆವಾಲನೂಡುತಿಹರು
ಹೇಸಿಕೆಯ ತನ್ನ ಮಲಮೂತ್ರದೊಳು ತಾ ಹೊರಳಿ
ಘಾಸಿಯಾಗುತ ಪೇಳುವರೆ ನುಡಿಗಳಿಲ್ಲಲಾ
ಯಾಸವದನೇಂ ಪೇಳ್ವೆ ನಿಜಲಿಂಗ ಭವಭಂಗ ಶರಣಜನವರದ ಜಯತು॥ ೭೮ ॥

ತರಳತನದಿಂದರಲು ಬಳಿಕ ಯೌವನ ಬರಲು
ತರುಣಿ ಸುತರಾಗಲವರನು ಸಲಹಬೇಕೆನುತ
ಪರಿಪರಿಯ ಧಾವತಿಯ ನೆಗಳಿ ಬಳಬಳಲಿ ನಾನಾಯೋಚನೆಯನೆಸಗುತ
ಇರಲನಿತರೊಳು ಸತಿಯು ಸುತರು ಮರಣಂಗೈಯೆ
ಪರಮಶೋಕಾತುರದಿ ನೊಂದು ಚಿಂತಿಸುವ ಕರ
ಕರಿಯು ಪೇಳುವರಳವೆ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೭೯ ॥

ಬದುಕು[೧]ಮನೆಮಾಡಿಕೊಂಡಿರೆ[೨] ಜರಾಂಗನೆಯು ತಾ[೩]
ನೊದಗಲಾಕ್ಷಣದಲ್ಲಿ ಪಂಚೇಂದ್ರಿಯಗಳು[೪]
ಹದಗೆಡಲು ಸತಿಸುತರು ಮುದಿಪಾಪಿ ತಾ[೫]ಸಾಯಲೊಲ್ಲನು ಯೆಂದು ಹಳಿಯು ತಿರಲು
ಇದು ಹೊರತು ಮರಣಗಾಲದೊಳೊಂದು ವ್ಯಾಧಿ[೬]ಯೊಳು[೬]
ಕುದಿಕುದಿದು ಪ್ರಾಣವನು ಬಿಡಬೇಕು ಸತ್ತುಹು
ಟ್ಟದ ಬಗೆಯ ಮಾಡು[೭]ವುದು ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೮೦
॥

ರೂಢಿಯೊಳಗೆಂತು ಜೀವಿಸಬೇಕು ಚಿತ್ತೈಸು
ಚಾಡಿಕೋರರು ಚೋರರುಗಳು ಸಿರಿವಂತರಡಿ[೮]
ನೋಡಿ ಬಳಲುವ ದುರಾಚಾರಿಗಳು ಪಾಪಿಗಳು ದುರ್ಜನರು ದಯಹೀನರು
ಕೂಡಿ ನಡೆವಲ್ಲಿ ಭೇದವನಿಕ್ಕುವರು ಪರರ್ಗೆ
ಕೇಡನೆಣಿಸುವರು ಕುಟಿಲರು ಕುಹಕಿಗಳು ಶಶಿಯ
ಸೂಡಿದನೆ ಸುಚರಿತ್ರ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೮೧ ॥

ಒಡವೆಯಾಸೆಗೆ ಬಾಲಕರ ಕೊರಳ ಛೇದಿಪರು
ಬಿಡದೆ ಸವತಿಯ ಶಿಶುವ ಬಾವಿಯೊಳು ಕೆಡಹುವರು
ಕಡೆಗೆ  ಧನಬರಲೆಂದು ಗರ್ಭಿಣಿಯ ಕೊಂಡೊಯ್ದು ಕಡಿಕಡಿದು ಕೊಲ್ಲುತಿಹರು
ಕಡುವಿಷವನಿಕ್ಕಿ ಮಲಮಕ್ಕಳನು ಕೊಲುತಿಹರು
ಕೊಡುವ ಧರ್ಮವ ಮಾಣಿಸುವರು ನಿಷ್ಕರುಣಿಗಳು
ನುಡಿದು ಪೇಳುವರಳವೆ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೮೨

॥

ಧನವಿರಲು ಧರ್ಮಮಾರ್ಗವ ಬಿಟ್ಟು ಮದವೇರಿ
ತನಗಾರು ಸರಿಯಿಲ್ಲವೆಂದು ಗರ್ವಿಸುತಿರಲು
ಮನೆಗೆ ಯಾಚಕರು ಬರಲವರಿಗೊಂದರೆಕಾಸು ಕೊಡದೆ ಹೊರಯಿಕೆ ಹಾಕಿಸಿ
ಮನಕೆ ಬಂದಂತೆ ಸುಜ್ಞಾನಿಗಳ ನಿಂದಿಸುತ
ಘನಮದೋನ್ನತದ ಬಲುದುರ್ಜನರ ಚಾರಿತ್ರ
ವನು ಪೇಳಲಳವಲ್ಲ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೮೩ ॥

ಸಲೆ ನಂಬಿದರೊಳೆರಡನೆಣಿಸುವರು ಕೈವಿಡಿದು
ಸಲಹಿ ದೊಡ್ಡವನ ಮಾಡಿದನ ಲೆಕ್ಕಿಸದಿಹರು
ಬಲುಸವಿಯ ಬಾಯಿಂದ ಪೊಣ್ಮಿಸುವರಾತ್ಮದೊಳಗವಗುಣವ ಸೇರಿಸಿಹರು
ಹೊಲೆಮನದ ವಿಶ್ವಾಸಘಾತಕರು ಪಾತಕರು
ಕುಲಹೀನರುಗಳು ಖೂಳರು ತಾವೆ ತಾವಾಗಿ
ನೆಲಸಿಹರು ಭೂಮಿಯೊಳು ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೮೪ ॥

ನೀತಿಯನು ಹಿಡಿಯಲೊಲ್ಲರು ಗುರುಹಿರಿಯರುಗಳ
ಮಾತ ಕೇಳರು ಸಜ್ಜನರನು ದೂಷಿಸುತಿಹರು
ಮಾತೆಪಿತರನು ಬೈದು ಬಳಲಿಸುವ ದುರ್ಜನರೊಳೆಂತು ಜೀವಿಸಲುಬೇಕು
ಭೂತನಾಯಕ ನೀನು ಮೋಕ್ಷದಾಯಕನೆಂದು
ನಾ ತಿಳಿದು ನಿನ್ನ ಪಾದಾಬ್ಜವನು ನಂಬಿದೆನು
ಓತು ಸಲಹುವುದಯ್ಯ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೮೫
॥

ಶಿವ ನಿಮ್ಮ ಚರಣಾರವಿಂದವನು ನೆರೆ ನಂಬಿ
ಭವಕಡಲನುತ್ತರಿಸಿ ನಿತ್ಯಪದವಿಯ ಸಾಧ
ನವ ಮಾಡಬೇಕೆಂಬ ಸದ್ಗುಣವು ಪಿರಿದು ಸುಕೃತವ ಮಾಡಿದರಿಗಲ್ಲದೆ
ಕವಲುಗೊಂಡಿಹ ಮನದ ನರಕಿಗಳಿಗೆಲ್ಲರಿಗೆ
ಧವಳಾಂಗ ನಿನ್ನ ನಾಮಾಮೃತವು ಬರಲುಂಟೆ

ರವಿಕೋಟಿಸನ್ನಿಭನೆ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೮೬
॥
ಮಲಯಜದ ಪರಿಮಳ ಸೂಕರಗೆ ತಿಳಿಯುಂಟೆ
ಜಲಜಾತಪರಿಮಳವು ಮಕ್ಷಿಕಗೆ ತಿಳಿಯುಂಟೆ
ಚೆಲುವ ಮುತ್ತಿನ ಸರವು ಮರ್ಕಟಗೆ ತಿಳಿಯುಂಟೆ ಮಧುರಸ್ವರ ಗೂಗೆಗುಂಟೆ
ಲಲಿತವೀಣೆಯ ಧ್ವನಿಯು ಕೋಣಂಗೆ ತಿಳಿಯುಂಟೆ
ಮಲಹರನೆ ನಿನ್ನ ಭಜನೆಯ ಮಾಡುವರೆ ಪೂರ್ವ
ದಲಿ ಪಡೆಯದರಿಗುಂಟೆ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೮೭
॥

ಅರಗಿಳಿಗಳಂತೆ ೧ಮರಕುಟಿಕ೧ ಮಾತಾಡುವುದೆ
ತುರಗನಂದದಲಿ ಗಾರ್ದಭನು ನಲಿದಾಡುವುದೆ
ಮೆರೆವ ಹಂಸನ ತೆರದಿ ಬಕನು ನೀರುಳುಹಿ ಕ್ಷೀರವನು ಸೇವಿಸಬಲ್ಲುದೆ
ವರಕೋಕಿಲನ ತೆರದಿ ಕಾಕ ಧ್ವನಿದೋರುವುದೆ
ಪರಮಭಕ್ತರು ನಿನ್ನ ಧ್ಯಾನವನು ಮಾಳ್ಪಂತೆ
ನರಕಿಗಳಿಗರಿವುಂಟೆ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೮೮
॥

ಕುರಿಗಳಿಗೆ ಕಬ್ಬಿನೊಳಗಿಹ ರಸವು ಬರಲುಂಟೆ
ಖರಗಳಿಗೆ ತೆಂಗಿನೊಳಗಿಹ ನೀರು ಬರಲುಂಟೆ
ಹರಿದು ರಕ್ತವ ಕುಡಿವ ಉಣ್ಣಿಗಳಿಗೆಲ್ಲ ಗೋವಿನ ಕ್ಷೀರ ಬರುವುದುಂಟೆ
ಹರನೆ ೨ಭವಹರನೆ ಯಮಹರನೆ ಸ್ಮರಹರನೆ ಪುರ೨
ಹರನೆ ಶಿರಕರನೆ ನಿನ್ನಯ ದಿವ್ಯ ಸ್ಮರಣೆಯದು
ಬರಲುಂಟೆ೩[ಪಾತಕಿಗೆ]೩ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೮೯
॥

ಶಿಲೆಯ ಮೇಲರವಿಂದವುದ್ಭವಿಸಿ ತೋರುವುದೆ
ಚೆಲುವ ಮುಕ್ತಾಫಲವು ಬೆಂಚೆಯೊ೪ಳಗಿರುತಿಹುದೆ೪

ಜಲವ ಮರ್ದಿಸಲು ನವನೀತ ಪೊಣ್ಮುವುದೆ ಅಜಗಳದಲ್ಲಿ ಮೆರೆವುತಿಪ್ಪ
ಮೊಲೆಗಳನು ತೊರೆವಿಡಿಯೆ ತನಿವಾಲು ಹೊರಡುವುದೆ
ಕುಲರಹಿತ ನಿನ್ನ ಧ್ಯಾನವು ಮಂದಮತಿಯ ಮನ
ದಲ್ಲಿ ತಾ ನೆಲಸುವುದೆ ನಿಜಲಿಂಗ ಭವಭಂಗ ಶರಣಜನವರದ ಜಯತು॥ ೯೦ ॥
ನಡುಮಾರ್ಗದೊಳಗೊರ್ವ ನಡೆನಡೆದು ಪೋಗುತಿರೆ
ಬಿಡದೆ ಪೆರ್ಬುಲಿ ಕಂಡು ಸಿಡಿಲು ಭೋರ್ಗರೆವಂತೆ
ಘುಡುಘುಡಿಸುತಾರ್ಭಟಿಸುತಡಿಗಡಿಗೆ ಮಲೆಯುತಲಿ ತಡವಿಡದೆ ಲಂಗಿಸುತಲಿ
ಕಡು ಭಯಂಕರದಿಂದೆ ನಡೆತರಲು ಭೀತಿಸದೆ
ಮೃಡ ನಿನ್ನ ನಾಮವನು ಬಿಡದೆ ಕೀರ್ತಿಸುತಿರಲು
ದೃಢಭಕ್ತನಹುದಹುದು ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೯೧ ॥

ಪೊದೆಪೊದೆಯ ತೃಣ ಬೆಳೆದ ಕಾಂತಾರದೊಳಗೊರ್ವ
ಒದವೊದಗಿ ನಡೆತರುವ ಸಮಯದೊಳಗಾ ತೃಣಕೆ
ಬೆದಬೆದನೆ ಕಿಚ್ಚೆದ್ದು ಸುಡುಸುಡುತ ಪೇರುರಿಯು ಧಗಧಗಿಸಿ ನಾಲ್ದೆಸೆಯನು
ಪದುಪದುಳದಿಂ ಮುಸಿಕಿಕೊಂಡು ಬರುತಿರಲದಕೆ
ಹೆದಹೆದರದಾತ್ಮದೊಳು ನಿನ್ನ ಧ್ಯಾನವ ಮಾಳ್ಪ
ಸದುಭಕ್ತನಹುದು ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೯೨ ॥

ತುರುಗಿರ್ದ ಕತ್ತಲೆಯೊಳೊರ್ವ ನಡುದಾರಿಯಲಿ
ಬರುವ ತತ್ಸಮಯದಲಿ ಕಾಳರಕ್ಕಸಿ ತನ್ನ
ಕರದಲ್ಲಿ ಕೊಳ್ಳಿಯನು ಹಿಡಕೊಂಡು ದಾಡೆಯೊಳು ಶಿರಗಳನು ಕಚ್ಚಿಕೊಂಡು
ಗರಗರನೆ ಕಣ್ಣು ತಿರುವುತ ಬಂದು ನಿಲಲದರ
ಪರಿಯ ಕಾಣುತ ಭೀತಿಗೊಳದೆ ಮನದೊಳು ನಿನ್ನ
ಸ್ಮರಿಸುವವ ದೃಢಭಕ್ತ ನಿಜಲಿಂಗ ಭವಭಂಗ ಶರಣಜನವರದ ಜಯತು॥ ೯೩ ॥

ಕಾಳಿಂಗಸರ್ಪ ತನ್ನೊಳು ತಾನೆ ರೋಷವನು
ತಾಳಿ ಭೋರ್ಗರೆಯುತ್ತಲಡಿಗಡಿಗೆ ನಾಲಗೆಯ
ಸೂಳೈಸಿ ತೆಗೆತೆಗೆದು ಬಲುವೇಗದಿಂದೆ ಹರಿಹರಿದು ಬರುವ
ವೇಳೆಯೊಳು ತನ್ನ ಮನದೊಳಗೆ ನಿರ್ಭೀತಿಯಲಿ
ಭಾಳಲೋಚನ ನಿನ್ನ ದಿವ್ಯ ನಾಮಾಮೃತವ
ಪೇಳುವವ ಸದ್ಭಕ್ತ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೯೪ ॥
ಕೆಲರು ಬಲುಮರುಳೆಂದು ಧಿಕ್ಕರಿಸಿ ಹಳಿಯುತಿರೆ
ಕೆಲರು ಬಲುಸುಜ್ಞಾನಿಯೆಂದೆನುತ ಪೊಗಳುತಿರೆ
ಕೆಲರು ಮತಿಹೀನ ಪಾಪಾತ್ಮನೆಂದಾಡುತಿರೆ ಕೆಲರು ಪುಣ್ಯಾತ್ಮನೆನಲು
ಕೆಲರು ಲೆಕ್ಕಿಸದೆ ನಡೆಯೆಂದು ಧೂಟಿಸುತಿರಲು
ಕೆಲರು ಮನ್ನಣೆಯಿಂದ ಕರೆಯೆ ಕುಂದದೆ ಹಿಗ್ಗ
ದಲೆ ನಡೆವನವ ಭಕ್ತ ನಿಜಲಿಂಗ ಭವಭಂಗ ಶರಣಜನವರದ ಜಯತು॥ ೯೫
॥

ಅರುವತ್ತುನಾಲ್ಕು ವಿದ್ಯೆಯಲಿ ಪರಿಣತನಾಗಿ
ಧುರಧೀರ ಧರ್ಮಾತ್ಮ ತ್ಯಾಗಿ ಭೋಗಿಯುಮೆನಿಸಿ
ನರಲೋಕದೊಳು ನರರ ನಡತೆಯಿಂದಲಿ ನಡೆಯುತಹುದೆನಿಸಿಕೊಂಡು ಬಳಿಕ
ಮೆರೆವ ಪಿಂಡಾಂಡದೊಳು ಸೂಕ್ಷ್ಮದಿಂದಡಗಿಪ್ಪ
ಪರಮಾತ್ಮನೊಳು ಮನವ ಸಂದು ಭವಕಡಲನು
ತ್ತರಿಸುವಂಗೆಣೆಯುಂಟೆ ನಿಜಲಿಂಗ ಭವಭಂಗ ಶರಣಜನವರದ ಜಯತು ॥
೯೬ ॥

ಬರಹ ಲೀಲಾವತಿಯು ಶಿಲ್ಪಸಾಮುದ್ರಿಕವು
ಭರತಶಾಸ್ತ್ರವು ಸೂಪಶಾಸ್ತ್ರ ಮನ್ಮಥಶಾಸ್ತ್ರ
ಮೆರೆವ ಜ್ಯೋತಿಷಶಾಸ್ತ್ರ ಶಬ್ದತರ್ಕಾದಿಗಳು ಸಕಲ ಶಾಸ್ತ್ರಗಳನೆಲ್ಲ
ನಿರುತದಿಂ ಸಾಧನವ ಬಿಡದೆ ಮಾಡಿದಡೇನು
ಪರಂಜ್ಯೋತಿವಸ್ತುವನು ತನ್ನೊಳಗೆ ತಿಳಿದು ಸುಖ
ವಿರುವ ವಿದ್ಯಕ್ಕೆಣೆಯೆ ನಿಜಲಿಂಗ ಭವಭಂಗ ಶರಣಜನವರದ ಜಯತು॥ ೯೭

॥

ಸತ್ವದಿಂದಲಿ ೨ಮಲೆತ೨ ಗಜವ ನಿಲಿಸಿದಡೇನು
ಮತ್ತೆ ಕೇಸರಿಯೊಡನೆ ಕಾದಿ ಜಯಿಸಿದಡೇನು
ಬಿತ್ತರದ ಛಪ್ಪನ್ನ ಭಾಷೆಗಳ ಕಲಿಕಲಿತು ಪ್ರೌಢನಾಗಿರ್ದಡೇನು
ಸತ್ತು ೩ಮರಮರಳಿ೩ ಹುಟ್ಟುವ ಬಾಧೆಯನು ಕಳೆದು
ನಿತ್ಯ ನಿರ್ಮಲ ನಿಜಾನಂದನಾಗಿರುವ೪ಪರ
ಮಾತ್ಮ೪ವಿದ್ಯಕ್ಕೆಣೆಯೆ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೯೮
॥

ಗೋತ್ರಕುಲಜಾತೆಯ ಕಳತ್ರ ಕಮನೀಯ ಚಾ
ರಿತ್ರ ಚತುರಾಸ್ಯ ಶಿರಪಾತ್ರ ನಿರ್ಮಲ ಧವಳ
ಗಾತ್ರ ನಾರದಸ್ತೋತ್ರ ಮಿತ್ರ ಹರಿಣಾಂಕ ಶಿಖಿನೇತ್ರ ಭವಲತಲವಿತ್ರ
ನೇತ್ರ ಶ್ರವಣಭೂಷ ಶತಪತ್ರಸಖ ಶರಧಿ
ಪುತ್ರಶೇಖರ ಪಂಚವಕ್ತ್ರ ಮಾಂ ಪಾಹಿ ಲೋ
ಕತ್ರಯಾಧಿಪ ದೇವ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೯೯ ॥

ರುದ್ರಾಣಿಯರಸ ಕನಕಾದ್ರಿಬಾಣಾಸನ ಸ
ಮುದ್ರಾತ್ಮಭವಮೌಳಿ ಭದ್ರನಾಗಿಹ೧ ವೀರ
ಭದ್ರನಂ ಪಡೆದ ಬಲಭದ್ರ೨ರಾಜಸು೨ಮಿತ್ರ ಕ್ಷುದ್ರಾಂಧಕಾಸುರಹರ
೩ರುದ್ರನಂ ನಾಕಜೋ೩ಪದ್ರ ಸಂಹರನ ದುರಿ
ತಾದ್ರಿಕುಲಿಶಂ ತುಂಗಭದ್ರತೀರದೊಳೆಸೆವ
ಕದ್ರುಭವಪುರವಾಸ ನಿಜಲಿಂಗ ಭವಭಂಗ ಶರಣಜನವರದ ಜಯತು ॥ ೧೦೦ ॥

